# ಕೊಡಗು ಸಂಗಾತಿ

ಜುಲೈ 1 ರಿಂದ 15, 2000 ಪಾಕ್ಷಿಕ ಪತ್ರಿಕೆ (ಕಾರ್ತೆಲ್ 17 ರಿಂದ 31 )

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

KA/SK/MYS-88 ಸಂಪುಟ : 4 ಸಂಚಿಕೆ : 13 ಪುಟಗಳು : 24 ಬೆಲೆ ರೂ. : 6-00



1945 - 2000

ಲೇಖನ : ಒಳಪುಟಗಳಲ್ಲಿ

## ಭಾರತೀಯ ವಾಯುದಳದ ನಿವೃತ್ತ ಪೈಲಟ್ ಹಾಗೂ ಕಾಂಗ್ರೆಸ್ಸಿನ ಹಿರಿಯ ನಾಯಕ ಮಾಜಿ ಕೇಂದ್ರ ಸಚಿವ ರಾಜೇಶ್ ಪೈಲಟ್ ನಿಧನ

## ನವದಂಪತಿಗಳಿಗೆ ಶುಭವಾಗಲಿ



**ಚಿ. ಸೌ. ಜ್ಯೋತಿ ಮತ್ತು ಚಿ. ರಾ. ಗೋಪಾಲಕೃಷ್ಣ**

ಬೆಂಗಳೂರಿನಲ್ಲಿರುವ ಆರ್. ಟಿ. ನಗರ ನಿವಾಸಿ ಕುಲ್ಲಚೆಟ್ಟಿರ ಶ್ರೀಮತಿ ಮತ್ತು ಶ್ರೀ ನಂಜಪ್ಪ ರುಕ್ಮಿಣಿಯವರ ಪುತ್ರಿ ಚಿ. ಸೌ. ಜ್ಯೋತಿ ಬಿ.ಕಾಂ. ಮತ್ತು ಚಿ.ರಾ ಗೋಪಾಲಕೃಷ್ಣ ಬಿ.ಎ. ಎಲ್.ಎಲ್.ಬಿ, ವಕೀಲರು, ಬೆಂಗಳೂರು ಮತ್ತು ಶ್ರೀಮತಿ ಮತ್ತು ಶ್ರೀ ಕೆದಂಬಾಡಿ ಪಾಪಣ್ಣ ಗೌಡರ ಮಗ, ಪುತ್ತೂರು ತಾಲೋಕು, ದ. ಕ. ಇವರ ವಿವಾಹ ಮಹೋತ್ಸವವು 28-5-2000 ರಂದು ಬೆಂಗಳೂರಿನ ಜಸ್ಮಾ ಭವನದಲ್ಲಿ ವಿಜೃಂಭಣೆಯಿಂದ ನೆರವೇರಿತು. ನಿಮ್ಮಿಬ್ಬರ ಈ ಬಾಂಧವ್ಯವು ಸರ್ವ ರೀತಿಯಲ್ಲಿ ಸುಖಕರವಾಗಿರಲಿ. ವೆಂಕಟರಮಣ ಸ್ವಾಮಿಯ ಕೃಪೆ ನಿಮ್ಮ ಮೇಲೆ ಸದಾ ಇದ್ದು ಕಾಪಾಡಲಿ ಎಂದು ಬೇಡಿಕೊಳ್ಳುತ್ತೇವೆ.

**ಯಿಂದ : ಕುಲ್ಲಚೆಟ್ಟಿರ ನಂಜಪ್ಪ ಮತ್ತು ರುಕ್ಮಿಣಿ, ಬೆಂಗಳೂರು.**

---

## ಶುಭ ಹಾರೈಕೆ



**ಕಡ್ಲೇರ ಭವ್ಯ ಶ್ರೀ ಬಾಲಕೃಷ್ಣ**
ಹುಟ್ಟಿದ ದಿನಾಂಕ : 12-8-1982
ಓದಿದ ತರಗತಿ : II P.U.C Commarce
ಒಟ್ಟು ಪಡೆದ ಅಂಕಗಳು : 494 = 83%

ಕಡ್ಲೇರ ಭವ್ಯಶ್ರೀ ಬಾಲಕೃಷ್ಣ L.K.G. ಯಿಂದ IInd Stdವರೆಗೆ ಕೇಂಬ್ರಿಡ್ಜ್ ಶಾಲೆಯಲ್ಲಿ ಓದಿಕೊಂಡಿದ್ದು ನಂತರ ವಿಜಯನಗರ ಬೆಂಗಳೂರುನಲ್ಲಿರುವ ಭಾರತಿ ಸಂಸ್ಕೃತಿ ವಿದ್ಯಾಪಾಠ ಶಾಲೆಯಾಗಿದೆ. ಇದು ಪೂರ್ಣ ಹೆಂಗಳೆಯರ (Ladies)ಶಾಲೆಯಾಗಿರುವುದು. ಶಾಲೆಯಲ್ಲಿ ಓದಿದ್ದಾಗಿನಿಂದ ಪ್ರತಿ ತರಗತಿಯಲ್ಲಿ ಮೊದಲನೇಯ ರ್‍ಯಾಂಕ್‌ನಲ್ಲಿಯೇ ಪಾಸಾಗುತ್ತಿರುವಳು. ಈಗ II P.U.C.ಯಲ್ಲಿ Commarce ವಿಭಾಗದಲ್ಲಿ ಒಟ್ಟು ಅಂಕ 494 ಪಡೆದಿದ್ದು 83%ನಲ್ಲಿ ತೇರ್ಗಡೆಯಾಗಿ, ಭಾರತಿ ಸಂಸ್ಕೃತಿ ವಿದ್ಯಾಫೀಠ ಶಾಲೆಗೆ ಹೆಗ್ಗಳಿಕೆ ತಂದಿರುವಳು. ಇವಳು ತಂದೆ ತಾಯಿಯವರಿಗೂ ಮತ್ತು ಭವಿಷ್ಯವನ್ನು ಸೃಷ್ಠಿಸಿ ಬೆಳೆಸುತ್ತಿರುವ ಹಾಗೂ ಅಪ್ಪನ ಸ್ಥಾನದಲ್ಲಿದ್ದು ಸಲಹುತ್ತಿರುವ ಕಡ್ಲೇರ ಜಾಜಿ ಮುದ್ದಹನುಮಯ್ಯನವರಿಗೆ ಸಲ್ಲತಕ್ಕದ್ದು. ಇವಳಿಗೆ ಕುಲದೇವ್ರು ವೆಂಕಟರಮಣನು ಮತ್ತು ಶೃಂಗೇರಿ ಶಾರದಾಂಬೆಯ ಕೃಪಾಕಟಾಕ್ಷ ಸದಾ ಇರಲಿ ಎಂದು ಶುಭ ಹಾರೈಸುವ,

**ಯಿಂದ : ಕಡ್ಲೇರ ಜಾಜಿ, ಮುದುಹನುಮಯ್ಯರವರು**
**ಕಡ್ಲೇರ ಬಾಲಕೃಷ್ಣ, ಮೀನಾಕ್ಷಿಯವರು**
**ಕಡ್ಲೇರ ಪಳಂಗಪ್ಪ, ಚಂದ್ರಿಕರವರು**
**ಕಡ್ಲೇರ ಗಣೇಶ, ಶಾಂತಿಯವರು**
**ಕಡ್ಲೇರ ದೇವೇಂದ್ರ, ಕಮಲರವರು**

**ಪ್ರಕಟಣೆ : ಕಡ್ಲೇರ ಜಾಜಿ, ಮುದ್ದಹನುಮಯ್ಯ, ಬೆಂಗಳೂರು.**



2000, ಜುಲೈ 1 ರಿಂದ 15 ರ ತನಕ

ಒಳನೋಟ 


| ಕನ್ನಡ ವಿಭಾಗ | ಲೇಖಕರು | ಪುಟಗಳು |
|---|---|---|
| ಕೊಡಗಿನ ಜಮಾಬಂದಿಗಳು ಮತ್ತು ಪಟ್ಟೆಗಾರಿಕೆಗೆ ಚ್ಯುತಿ | - ಸಂಪಾದಕೀಯ | 02 |
| ವಾಯುದಳದ ನಿವೃತ್ತ ಪೈಲಟ್ ಹಾಗೂ ಕಾಂಗ್ರೆಸ್ಸಿನ ಹಿರಿಯ ನಾಯಕ, ಮಾಜಿ ಕೇಂದ್ರ ಸಚಿವ ರಾಜೇಶ್ ಪೈಲಟ್ ಅವರ ನಿಧನ. | - ಸಂಗಾತಿ ವರದಿ | 02 |
| ಗೌಡ ಮಹಿಳಾ ಒಕ್ಕೂಟದ ದ್ವಿತೀಯ ವಾರ್ಷಿಕ ಮಹಾಸಭೆ ಮತ್ತು ವಾರ್ಷಿಕೋತ್ಸವ | - ಸಂಗಾತಿ ವರದಿ | 04 |
| College - Call-age | - ಗೀತಾ ಎಡಿಕೇರಿ | 06 |
| ಸಂಗಾತಿ ಭವಿಷ್ಯ | - ಗಿರೀಶ್‌ಕುಮಾರ್ | 07 |
| ನರಭಕ್ಷಕ | - ತಳೂರು ಸುಧಿ ಬಾಲಕೃಷ್ಣ | 12 |
| ಕಾಡಾನೆಗೆ ಮಾಡಿದರು ಪೂಜೆ | - ಬೈತಡ್ಕ ಹೇಮ ಕುಂಜ್ಞಪ್ಪ | 14 |
| ಸಾವು | - ಚೇಂದ್ರಿಮಾಡ ಗ. ಮುತ್ತಪ್ಪ | 15 |
| ಸರ್ಪಗಂಧ - ಧಾರವಾಹಿ - 33 | - ಕೌಂಡಿನ್ಯ | 16 |
| ವಿದ್ಯಾವಂತ ನಿರದ್ಯೋಗಿಗಳಿಗೆ ಮಾರ್ಗದರ್ಶನ ಕೈಪಿಡಿ | - ತಡಿಯಪ್ಪನ ಕುಮಾರ ಜಯ | 17 |
| ಗೌಡ ಸಮಾಜ - ಮರಗೋಡು ಕಟ್ಟಡ ನಿರ್ಮಾಣಕ್ಕೆ ಧನ ಸಹಾಯ ಮಾಡಿದ ಕೊಡುಗೈ ದಾನಿಗಳ ಹೆಸರು | - ಸಂಗಾತಿ ವರದಿ | 18 |
| **ಅರೆಭಾಷಿಕ ವಿಭಾಗ** | | |
| ವಾಂಟೆಡ್ ಮಿಸ್ಟರ್ ರಾಜು - ಧಾರಾವಾಹಿ - 13 | - ಶಂಕರನ ಬಸಪ್ಪ | 08 |
| ಕಳ್ಳ್ ಕುಡಿಯುವ 'ಆಸೆಗಾಗಿ' ಹಂದಿ ವೇಷ ಹಾಕಿತ್ | - ತೆಕ್ಕಡೆ. ಬಿ. ರಘುನಾಥ | 10 |
| ಏ ಹೈದಾ ! ನೀ ಕ್ಯೊದ !! | - ಸಂಧ್ಯಾ | 11 |
| ನಾನ್ ಪಿಚ್ಚರ್‌ಗೆ ಹೋದ ಕಥೆ | - ನವೀನ ದೇರಳ | 11 |
| ಮದ್ವೆಗೆ | - ಸುಜಾಮಧು | 19 |



| | |
|---|---|
|  ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ**, 35,"ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12. ಫೋನ್ : **0821/516771** |
|  ಮಡಿಕೇರಿಯಲ್ಲಿ ಸಂಗಾತಿ ಕಛೇರಿ | ಬೈತಡ್ಕ ಜಾನಕಿ ಬೆಳ್ಯಪ್ಪ,,ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, ಫೋನ್ : **08272/28047** |
|  ಸಂಗಾತಿ ಚಿಹ್ನೆ, ಹಸೆಮಣೆ ಪುಸ್ತಕ ಅರೆಭಾಷೆ ಕ್ಯಾಸೆಟ್ ಲಭ್ಯ | ಪಾಂಡ್ಯನ್ ಕ್ಯಾಸೆಟ್ ಅಂಗಡಿ, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ ಫೋನ್ : 08272/29620 |
|  ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/73370 |
|  ಬೆಂಗಳೂರು ಮಹಾನಗರ | ಅಮ್ಮಾಜೀರ ಪೊನ್ನಪ್ಪ, 20, 1ನೇ ಮೈನ್, 4ನೇ ಕ್ರಾಸ್, ಸಾಕಮ್ಮ ಗಾರ್ಡನ್, ಬಸವನಗುಡಿ, ಬೆಂಗಳೂರು - 04, ಫೋನ್ :080/6342822 |
|  ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19,ಫೋನ್ : 080/6500946 |

 ಚಂದಾ ವಿವರ : ಜೀವಾವಧಿ ಸದಸ್ಯತನ - **2000** ರೂ., ಬಿಡಿ ಪ್ರತಿ - **6** ರೂ., ಅರ್ಧ ವಾರ್ಷಿಕ -75 ರೂ., ವಾರ್ಷಿಕ ಚಂದಾ - **150** ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಕೊಡಗಿನ ಜಮಾಬಂದಿಗಳು ಮತ್ತು ಪಟ್ಟೆಗಾರಿಕೆಗೆ ಚ್ಯುತಿ

ಕರ್ನಾಟಕ ಸರ್ಕಾರದವರು ಇಡೀ ಕರ್ನಾಟಕಕ್ಕಾಗಿ ಒಂದೇ ರೀತಿಯ ಭೂ ಹಿಡುವಳಿಯನ್ನ ತರುವುದಕ್ಕಾಗಿ ಹಳೇ ಮೈಸೂರಿನ ಮಾದರಿಯ ಆರ್.ಟಿ.ಸಿ.ಯನ್ನು ಅಳವಡಿಸುತ್ತಾರೆಂಬ ವಿಷಯ ಕೇಳಿ ಬಂತು. ಆದರೆ ಕೊಡಗಿನಲ್ಲಿ ಸರ್ವ ಸಾಮಾನ್ಯವಾಗಿ ಒಕ್ಕುಟುಂಬ ಪದ್ದತಿ ಇರುವುದರಿಂದ ಹಳೆ ಮೈಸೂರಿನ ರೀತಿಯ ಆರ್.ಟಿ.ಸಿ.ಯನ್ನು ಅಳವಡಿಸಿದರೆ ಜನರಿಗೆ ಖಂಡಿತಾ ತೊಂದರೆ ಯಾಗುತ್ತದೆ. ಕೊಡಗಿನಲ್ಲಿ ಒಕ್ಕುಟುಂಬ ಪದ್ದತಿಯು ನಿಜವಾದ ರೀತಿಯಲ್ಲಿ ಆಚರಣೆಯಲ್ಲಿಲ್ಲದಿದ್ದರೂ ಭೂ ಹಿಡುವಳಿಯ ವಿಷಯದಲ್ಲಿ ಕುಟುಂಬದ ಹಿರಿಯ ಹೆಸರಿನಲ್ಲಿ ಪಟ್ಟೆ ಇದ್ದು ಜಮೀನಿನ ಹಕ್ಕುದಾರರ ಹೆಸರು 6ನೇ ಕಲಂನಲ್ಲಿರುವುದರಿಂದ ಪ್ರತಿ ಸರ್ವೆ ನಂಬರಿನಲ್ಲಿ ಕುಟುಂಬದ ಹಕ್ಕುದಾರಿಕೆ ಇರುವ ಸದಸ್ಯರ ಹೆಸರು ನಮೂದಿಸಲ್ಪಟ್ಟಿದೆ. ಆದರೆ ಹಳೆ ಮೈಸೂರಿನ ಕಲಂ ನಂ. 9ರಲ್ಲಿ ಕಬ್ರೆ ಅಥವಾ ಸ್ವಾದೀನದಾರನ ಹೆಸರು ತಂದೆ ಹೆಸರು ಮತ್ತು ವಿಳಾಸ ಎಂಬುದಾಗಿದೆ, ಇದು ಪಟ್ಟೆದಾರನ ಹೆಸರೆಂದು ಪರಿಗಣಿಸಿದರೂ ಹಕ್ಕುದಾರರ ಹೆಸರು ಬರುವುದು 12ನೇ ಕಲಂ ನ ಸಬ್ ನಂ 2 ರಲ್ಲಿ ಗೇಣಿಯ ವಿವರಗಳು ಬರುವಲ್ಲಿ ವ್ಯವಸಾಯಗಾರನ ಹೆಸರು ಮತ್ತು ವಿಳಾಸ ಎಂಬದಾಗಿದೆ. ಇದು ಗೇಣಿ ದಾರರಿಗೆ ಮಾತ್ರ ಸಂಬಂಧ ಪಟ್ಟದ್ದರಿಂದ ಹಕ್ಕುದಾರರ ಹೆಸರನ್ನು ಬರೆಯುವ ಕಲಂ ಇಲ್ಲ. ಬಹುಷ್ಯ 9ನೇ ಕಲಂ ನಲ್ಲಿ ಹಕ್ಕುದಾರರ ಹೆಸರೆಲ್ಲಾ ಬಂದರೆ ಕೊಡಗಿನಲ್ಲಿರುವ ಪಟ್ಟೆದಾರನಿಗೆ ಯಾವ ಕಲಂನಲ್ಲೂ ಅವಕಾಶ ಇಲ್ಲ. ಇಂತಹ ಸಂದರ್ಭದಲ್ಲಿ ಪ್ರತಿಯೊಬ್ಬ ಹಕ್ಕುದಾರನ ಹೆಸರು ಆರ್‌ಟಿಸಿಯಲ್ಲಿ ಸೇರಿಸ ಬೇಕಾಗುತ್ತದೆ. ಆ ಸಂದರ್ಭದಲ್ಲಿ ಕೊಡಗಿನ ಒಕ್ಕುಟುಂಬಗಳೇ ಇಲ್ಲದೆ ಐನ್ ಮನೆಗಳನ್ನೂ ಕೇಳುವವರೇ ಇಲ್ಲದಾಗಿ ಒಕ್ಕುಟುಂಬ ಚೂರು ಚೂರು ಆಗಿ ಕೊನೆಯಲ್ಲಿ 10 ಸೆಂಟು ಪಾಲಿರುವವನಿಗೆ ಪ್ರತ್ಯೇಕ ಹಿಡುವಳಿದಾರನಾಗಿ ಅವನವನ ಇಚ್ಛೆ ಪ್ರಕಾರ ಮಾರಾಟ ಮಾಡಿ ಸ್ವಲ್ಪವಾದರೂ ಶಾಂತಿ ನೆಲಸಿರುವ ಕೊಡಗಿನಲ್ಲಿ ಜಮೀನಿನ ವಿಷಯದಲ್ಲಿ ಕುರುಕ್ಷೇತ್ರ ಪ್ರಾರಂಭವಾಗುತ್ತದೆ. ಆದ್ದರಿಂದ ಸರ್ಕಾರ ಈ ಬದಲಾವಣೆ ಮಾಡುವಾಗ ಅನುಭವಿ ಪ್ರಜೆಗಳನ್ನು ವಿಚಾರಿಸಿ ಬದಲಾವಣೆ ಮಾಡ ಬೇಕೆಂದು ಸಂಗಾತಿಯು ತಿಳಿಸುತ್ತದೆ,

## ವಾಯುದಳದ ನಿವೃತ್ತ ಪೈಲಟ್ ಹಾಗೂ ಕಾಂಗ್ರೆಸ್ಸಿನ ಹಿರಿಯ ನಾಯಕ, ಮಾಜಿ ಕೇಂದ್ರ ಸಚಿವ ರಾಜೇಶ್ ಪೈಲಟ್ ಅವರ ನಿಧನ.

ಕಾಂಗ್ರೆಸ್‌ನ ಹಿರಿಯ ನಾಯಕ ಹಾಗೂ ಮಾಜಿ ಕೇಂದ್ರ ಸಚಿವ ರಾಜೇಶ್ ಪೈಲಟ್ ಜೂನ್ ೧೧ರಂದು ರಾಜಾಸ್ತಾನದ ದೌಸಾ ಬಳಿ ಸಂಭವಿಸಿದ ರಸ್ತೆ ಅಪಘಾತದಲ್ಲಿ ಸಾವನ್ನಪ್ಪಿದರು. ಅವರಿಗೆ ೫೫ ವರ್ಷವಾಗಿತ್ತು.

ಪೈಲಟ್ ಅವರು ಮುಂಜಾನೆ ತಮ್ಮ ಕ್ಷೇತ್ರ ದೌಸಾಗೆ ಆಗಮಿಸಿದ್ದರು. ಒಂದು ದಿನದ ಪ್ರವಾಸ ಮುಗಿಸಿ ಜೈಪುರಕ್ಕೆ ತೆರಳಿ ವಿಮಾನದಲ್ಲಿ ಪುನಃ ದೆಹಲಿಗೆ ತೆರಳಲು ಹೊರಟಿದ್ದರು. ಸಂಜೆ ೪.೩೦ರ ವೇಳೆ ಅವರೇ ಓಡಿಸುತ್ತಿದ್ದ ವ್ಯಾನ್ ಭಾಂದನಾ ಎಂಬಲ್ಲಿ ರಾಜಸ್ತಾನ ಸಾರಿಗೆ ಸಂಸ್ಥೆಯ ಬಸ್‌ಗೆ ಮುಖಾ ಮುಖಿ ಢಿಕ್ಕಿ ಹೊಡೆದುದರಿಂದ ಅವರು ಗಂಭೀರವಾಗಿ ಗಾಯಗೊಂಡರು. ಕೂಡಲೇ ಅವರನ್ನು ಸವಾಯಿ ಮಾನ್‌ಸಿಂಗ್ ಆಸ್ಪತ್ರೆಗೆ ದಾಖಲಿಸಲಾಯಿತು. ಸಾವು - ಬದುಕಿನ ಮಧ್ಯೆ ಹೋರಾಡುತ್ತಿದ್ದ ಪೈಲಟ್‌ರನ್ನು ಬದುಕಿಸಲು ವೈದ್ಯರ ತಂಡ ಸತತ ಯತ್ನ ನಡೆಸಿದರೂ ಚಿಕಿತ್ಸೆ ಫಲಕಾರಿಯಾಗದೇ ಸುಮಾರು ೪೫ ನಿಮಿಷಗಳಲ್ಲಿ ಕೊನೆಯುಸಿರೆಳೆದರು.

ಪೈಲಟ್‌ರವರ ವ್ಯಾನು ಬಸ್ಸಿಗೆ ಡಿಕ್ಕಿ ಹೊಡೆಯುತ್ತಿದ್ದಂತೆ ಅವರು ರಸ್ತೆಗೆಸೆಯಲ್ಪಟ್ಟರು.

ಪೈಲಟ್‌ರವರು ಪತ್ನಿ ರಮಾ ಪೈಲಟ್, ಓರ್ವ ಪುತ್ರ ಹಾಗೂ ಓರ್ವ ಪುತ್ರಿಯನ್ನು ಅಗಲಿದ್ದಾರೆ.

ಪೈಲಟ್‌ರೊಂದಿಗೆ ವಾಹನದಲ್ಲಿದ್ದ ಅವರ ಖಾಸಗಿ ಅಂಗರಕ್ಷಕ ಅಧಿಕಾರಿ ಹರಿಸಿಂಗ್ ಸ್ಥಳದಲ್ಲೇ ಸಾವನ್ನಪ್ಪಿದ್ದಾರೆ. ರಾಜಸ್ತಾನದ ಕಾಂಗ್ರೆಸ್ ಶಾಸಕ ಮಹೇಂದ್ರ ಮೀನಾ ಹಾಗೂ ಕಾಂಗ್ರೆಸ್ ಕಾರ್ಯಕರ್ತರಿಬ್ಬರು ಆಸ್ಪತ್ರೆಗೆ ದಾಖಲಾಗಿದ್ದರು.

ಪೈಲಟ್‌ರವರ ಸಾವಿನ ಸುದ್ದಿ ತಿಳಿಯುತ್ತಲೇ ದೆಹಲಿ ಯಲ್ಲಿರುವ ಅವರ ಪತ್ನಿ ದೌಸಾಕ್ಕೆ ಧಾವಿಸಿದರು. ನಂತರ ಮೃತದೇಹವನ್ನು ದೆಹಲಿಗೆ ಕೊಂಡೊಯ್ದು ಅಂತ್ಯಕ್ರಿಯೆ ಮಾಡಲಾಯಿತು.

ನಾಳೆ ರಾಜಸ್ತಾನದಲ್ಲಿ ಎಐಸಿಸಿ ಅಧ್ಯಕ್ಷೆ ಸೋನಿಯಾ ಗಾಂಧಿ ಅವರ ಕಾರ್ಯಕ್ರಮ ಏರ್ಪಾಡಾಗಿದ್ದು, ಆ ನಿಮಿತ್ತ ಪೈಲಟ್ ಸ್ವಕ್ಷೇತ್ರಕ್ಕೆ ಹೋಗಿದ್ದರು.

### ಪೈಲಟ್‌ಗೆ ಗಣ್ಯರ ಕಂಬನಿ

ರಾಷ್ಟ್ರಪತಿ ಕೆ.ಆರ್. ನಾರಾಯಣ್, ಉಪರಾಷ್ಟ್ರಪತಿ ಕೃಷ್ಣಕಾಂತ್, ಪ್ರಧಾನ ಮಂತ್ರಿ ಅಟಲ್ ಬಿಹಾರಿ ವಾಜಪೇಯಿ, ಕಾಂಗ್ರೆಸ್ ಅಧ್ಯಕ್ಷೆ ಸೋನಿಯಾ ಗಾಂಧಿ ಮತ್ತು ಎಲ್ಲ ಪಕ್ಷದ ಮುಖಂಡರು ಕಾಂಗ್ರೆಸ್ ಧುರೀಣ ರಾಜೇಶ್ ಪೈಲಟ್‌ರ ಸಾವಿಗೆ ತೀವ್ರ ಸಂತಾಪ ವ್ಯಕ್ತಪಡಿಸಿದ್ದಾರೆ.

ಸಾರ್ವಜನಿಕ ಜೀವನದಲ್ಲಿ ಪೈಲಟ್ ಓರ್ವ ಅತ್ಯಂತ ಉತ್ತಮ ಸಂಸದೀಯ ಪಟು ಮತ್ತು ಕ್ರಿಯಾಶೀಲ ವ್ಯಕ್ತಿ ಎಂದು ರಾಷ್ಟ್ರಪತಿಗಳು ತಮ್ಮ ಸಂತಾಪ ಸಂದೇಶದಲ್ಲಿ ತಿಳಿಸಿದ್ದಾರೆ.

ಬಲ್ಗೇರಿಯಾ ಪ್ರವಾಸದಲ್ಲಿರುವ ಉಪ ರಾಷ್ಟ್ರಪತಿ ಕೃಷ್ಣಕಾಂತ್, ತಮ್ಮ ತೀವ್ರ ಸಂತಾಪ ವ್ಯಕ್ತಪಡಿಸಿ, ಇವರ

ಅಗಲಿಕೆಯನ್ನು ಸಹಿಸುವ ಶಕ್ತಿಯನ್ನು ಅವರ ಕುಟುಂಬಕ್ಕೆ ದೇವರು ನೀಡಲಿ ಎಂದಿದ್ದಾರೆ.

ಪ್ರಧಾನಮಂತ್ರಿ ಅಟಲ್ ಬಿಹಾರಿ ವಾಜಪೇಯಿಯವರು ಕಾಂಗ್ರೆಸ್ ಧುರೀಣ ಪೈಲಟ್ ಅವರ ಸಾವಿಗೆ ತೀವ್ರ ಶೋಕ ವ್ಯಕ್ತಪಡಿಸಿದ್ದಾರೆ.

ಲೋಕಸಭಾಧ್ಯಕ್ಷ ಜಿಎಂಸಿ ಬಾಲಯೋಗಿ, ಗೃಹ ಸಚಿವ ಎಲ್.ಕೆ. ಅಡ್ವಾನಿ, ಸಮಾಜವಾದಿ ಪಕ್ಷದ ಮುಖಂಡ ಮುಲಾಯಂ ಸಿಂಗ್‌ಯಾದವ್, ಮಾಜಿ ಕಾಂಗ್ರೆಸ್ ಅಧ್ಯಕ್ಷ ಸೀತಾರಾಂ ಕೇಸರಿ ಅವರಲ್ಲದೆ ಎಲ್ಲ ಪಕ್ಷಗಳ ಮುಖಂಡರು ರಾಜೇಶ್ ಪೈಲಟ್ ಅವರ ಅಗಲಿಕೆಗೆ ಕಂಬನಿ ಮಿಡಿದ್ದಿದ್ದಾರೆ.

## ಕಮರಿ ಹೊದ ಪ್ರಧಾನಿ ಹುದ್ದೆಯ ಕನಸು

ಒಂದಿಲ್ಲೊಂದು ದಿನ ಪ್ರಧಾನಮಂತ್ರಿ ಪದವಿ ಅಲಂಕರಿಸುವ ಕನಸು ಕಾಣುತ್ತಿದ್ದವರು ಪೈಲಟ್. ಅದಕ್ಕಾಗಿ ಅವರು ಪ್ರಯತ್ನಿಸಿಯೂ ಇದ್ದರು. ತಮ್ಮ ಬಯಕೆಯನ್ನು ಅವರು ಮುಚ್ಚಿಟ್ಟುಕೊಂಡವರೂ ಅಲ್ಲ. ಅಂತಹ ನಿರ್ಭಿಡೆಯ ಮನಸ್ಸು ಅವರದು.

ಪೈಲಟ್‌ರವರು ತಮ್ಮ ಜೀವನಯಾತ್ರೆಯನ್ನು ಮುಗಿಸುವುದರೊಂದಿಗೆ ಈ ಕನಸು ಈಗ ಕಮರಿ ಹೋದಂತಾಗಿದೆ.

ರೈತ ಸಮುದಾಯದಿಂದ ಬೆಳೆದು ಬಂದ ರಾಜಸ್ತಾನದ ಈಗುಜ್ಜರ್ ನಾಯಕ, ೧೯೮೦ರಲ್ಲಿ ಭರತ್‌ಪುರ್ ಲೋಕಸಭಾ ಕ್ಷೇತ್ರದಿಂದ ೧೯೮೪ ರಿಂದ ದೌಸಾ ಕ್ಷೇತ್ರದಿಂದ ಆಯ್ಕೆಯಾಗಿದ್ದರು. ಕೇಂದ್ರದಲ್ಲಿ ಭೂಸಾರಿಗೆ ಸಚಿವರಾಗಿ ಸೇವೆ ಸಲ್ಲಿಸಿದ್ದರು. ಕಾಂಗ್ರೆಸ್ ಅಧ್ಯಕ್ಷಸ್ಥಾನವನ್ನು ಮಾಜಿ ಪ್ರಧಾನಿ ಪಿ.ವಿ. ನರಸಿಂಹರಾವ್ ತ್ಯಜಿಸಿದಾಗ, ತಾನು ಸ್ಪರ್ಧಿಸಿ, ಕಾಂಗ್ರೆಸ್‌ನಲ್ಲಿ ಬಂಡಾಯದ ಛಾಯೆ ಮೂಡಿಸಿದ್ದರು. ಆದರೆ ಸೀತಾರಾಂ ಕೇಶರಿ ಎದುರು ಪರಾಭವಗೊಂಡಿದ್ದರು.

ಸೈನ್ಯದ ನಿವೃತ್ತ ಹವಾಲ್ದಾರ್ ರಾಜೇಶ್ವರ ಪ್ರಸಾದ್ ಸಿಂಗ್ ಕುಟುಂಬದಲ್ಲಿ ಜನಿಸಿದ ರಾಜೇಶ್, ಭಾರತೀಯ ವಾಯು ಪಡೆಯಲ್ಲಿ ಪೈಲಟ್‌ರಾಗಿ ಸೇವೆ ಸಲ್ಲಿಸಿದ್ದರಿಂದ ಮಿತ್ರರಿಂದ ಅವರ ಹೆಸರಿನೊಡನೆ 'ಪೈಲಟ್' ಎಂಬ ಪದ ಅಂಟಿಕೊಂಡಿತ್ತು. ರಾಜಕೀಯ ನಾಯಕರು ಸಂಚರಿಸುವ ವಿಮಾನದಲ್ಲಿ ರಾಜೇಶ್ ಚಾಲಕರಾಗಿದ್ದುದು ರಾಜಕೀಯ ಪ್ರವೇಶಕ್ಕೆ ಕಾರಣವಾಯಿತು.

ನೇರ ನುಡಿ, ಬಂಡಾಯ ಸ್ವಭಾವ, ಕ್ರಾಂತಿಕಾರಿ ಮನೋಭಾವದಿಂದ ಎಲ್ಲ ರಾಜಕಾರಣಿಗಳ ಮನಗೆದ್ದಿದ್ದರು. ಅವರನ್ನು ಕಾಂಗ್ರೆಸ್‌ನ ಭಾವೀ ಅಧ್ಯಕ್ಷ ಎಂದೇ ಗುರುತಿಸಲಾಗುತ್ತಿತ್ತು.

ಕಾಂಗ್ರೆಸ್ ಪಕ್ಷ ಆಪತ್ತಿಗೆ ಸಿಲುಕಿದಾಗ ಹಲವಾರು ಬಾರಿ ಅದನ್ನು ಪಾರು ಮಾಡಿದ ಕೀರ್ತಿ ಪೈಲಟ್‌ರದು. ಅಸ್ಸಾಂನಲ್ಲಿನ ಚಳುವಳಿಯನ್ನು ಪರಿಹರಿಸಿ ಒಂದು ಇತ್ಯರ್ಥ ಕಂಡು ಹಿಡಿದು ೧೯೮೫ರಲ್ಲಿ ವಿಧಾನ ಸಭಾ ಚುನಾವಣೆ ನಡೆಯಲು ಸೂಕ್ತ ವಾತಾವರಣ ಕಲ್ಪಿಸಿದ ಕೀರ್ತಿ ಪೈಲಟ್ ಅವರದ್ದಾಗಿದೆ. ಜಮ್ಮು-ಕಾಶ್ಮೀರದ ಮುಖ್ಯಮಂತ್ರಿ ಫಾರೂಕ್ ಅಬ್ದುಲ್ಲಾ ಅವರೊಂದಿಗೆ ಶಾಂತಿ ಮಾತುಕತೆ, ಉ.ಪ್ರ.ದ ಮಾಜಿ ಮುಖ್ಯಮಂತ್ರಿ ನಾರಾಯಣ ದತ್ತ ತಿವಾರಿ ಹಾಗೂ ಭಾರತೀಯ ಕಿಸಾನ್ ಯೂನಿಯನ್ ನಾಯಕ ಟಿಕಾಯತ್‌ರೊಂದಿಗೆ ಮಾತುಕತೆ ನಡೆಸಿ ರೈತರ ಬೃಹತ್ ಚಳುವಳಿಗೆ ಮಂಗಳ ಹಾಡಿದ್ದರು.

ನಿರರ್ಗಳವಾಗಿ ಮಾತನಾಡುವ, ಜನರನ್ನು ಆಕರ್ಷಿಸುವ ಗುಣ ಹೊಂದಿದ್ದ ಪೈಲಟ್, ರೈತರ ಸಮಸ್ಯೆಗೆ ಬಹುಬೇಗ ಸ್ಪಂದಿಸುತ್ತಿದ್ದರು.

ಉತ್ತಮ ಗುಣಗಳು ಮನುಷ್ಯನನ್ನು ಒಳ್ಳೆಯ ನಾಯಕನನ್ನಾಗಿ ರೂಪಿಸಬಲ್ಲವು ಎಂದು ಹೇಳುತ್ತಿದ್ದ ಪೈಲಟ್, ಜಾತ್ಯತೀತ ಮನೋಭಾವದವರಾಗಿದ್ದರು. ಟಾಡಾ ಕಾಯ್ದೆಯನ್ನು ಜಾರಿಗೆ ತರುವ ವೇಳೆ ಅದನ್ನು ವಿರೋಧಿಸಿದ್ದರು.

ಸೋನಿಯಾ ಗಾಂಧಿ ನಾಯಕತ್ವವನ್ನು ಅವರು ದಿಟ್ಟತನದಿಂದಲೇ ಪ್ರಶ್ನಿಸಿದ್ದರು. ಉತ್ತರ ಪ್ರದೇಶದಲ್ಲಿ ಜಿತೇಂದ್ರಪ್ರಸಾದ್‌ರನ್ನು ಬದಲಿಸಿ ಅಲ್ಲಿನ ಕಾಂಗ್ರೆಸ್‌ಗೆ ಸಲ್ಮಾನ್ ಖುರ್ಷಿದ್‌ರನ್ನು ಅಧ್ಯಕ್ಷರನ್ನಾಗಿಸಿದಾಗ, ಅಲ್ಲಿನ ಭಿನ್ನಮತೀಯರು ಲಖ್ನೋ ಮತ್ತು ಝಾನ್ಸಿಯಲ್ಲಿ ಏರ್ಪಡಿಸಿದ್ದ ರ್‍ಯಾಲಿಯಲ್ಲಿ ಪಾಲ್ಗೊಂಡು ವಿವಾದ ಎಬ್ಬಿಸಿದ್ದರು.

೧೩ ವರ್ಷಗಳ ಕಾಲ ವಾಯುದಳದಲ್ಲಿ ಸೇವೆ ಸಲ್ಲಿಸಿ, ಬಾಂಗ್ಲಾ ದೇಶದ ಯುದ್ಧದ ವೇಳೆ ಬಾಂಬ್ ಕಾರ್ಯಾಚರಣೆಯ ಅಧಿಕಾರಿಯಾಗಿದ್ದರು. ಬಹುಶಃ ಅಲ್ಲಿಂದಲೇ ಅವರು ಹೋರಾಟದ ಗುಣಗಳನ್ನು ಅಳವಡಿಸಿಕೊಂಡಿರ ಬಹುದು.

ಹಾಗೂ ರಾಷ್ಟ್ರೀಯ ಮಾಜಿ ಸೈನಿಕರ ಸಮನ್ವಯ ಸಮಿತಿಯ ಮುಖ್ಯ ಪ್ಯಾಟರ್ನ್ ಆಗಿದ್ದು ಅವರ ಎಲ್ಲಾ ಸಮಸ್ಯೆಗಳಿಗೆ ಸ್ಪಂದಿಸುತ್ತಿದ ಶ್ರೀಯುತ ನಿಧನಕ್ಕೆ ಮಾಜಿ ಸೈನಿಕರ ಪರವಾಗಿ ಅವರ ಆತ್ಮಕ್ಕೆ ಶಾಂತಿಯ್ನು ಬಯಸೋಣಾ.

**ಸಂಗಾತಿ ವರದಿ**

---

### ಹರಿ ಸೇವೆ

ತಾರೀಕ್ 31-5-2000 ನೇ ಇಸ್ಟಿ ಬುಧವಾರ ದಿನ ಹಗಲು 10ಗಂಟೆಗೆ ಮದೆ ಗ್ರಾಮದ ಹುಲಿಮನೆ ಕುಟುಂಬಸ್ಥರ ಐನ್ ಮನೇಲಿ ಕುಲದೈವ ಶ್ರೀ ವೆಂಕಟರಮಣ ಸ್ವಾಮಿಯ ಹರಿಸೇವೆ ಮತ್ತೆ ಕೆಂಚರಾಯನ ಪೂಜೆ ಬಹಳ ಲಾಯ್ಕಾಗಿ ನಡ್ತ್ ಅಲ್ಲದೇ ನೂರಾರು ಭಕ್ತಾದಿಗ ಬಂದ್ ಪ್ರಸಾದ ಸ್ವೀಕರಿಸಿ ದೇವರ ಕೃಪೆಗೆ ಪಾತ್ರರಾಗೊಳೊ.

**ವರದಿ : ಹುಲಿಮನೆ ಸಹದೇವ ಕೇಶವಯ್ಯ, ಮದೆಗ್ರಾಮ.**

---

### ಶುಭ ವಿವಾಹ

ಮದೆನಾಡಿನ ಮಡಿಕೇರಿ ನಿವಾಸಿ ಪಟ್ಟಡ ಮಾಚಯ್ಯನವ್ರ ಮಗ ವಿನೋದ್‌ನಿಗೂ ಮತ್ತು ಹೊಸ್ಕೇರಿ, ಮರಗೋಡು ಗ್ರಾಮದ ಬಡುಮಂಡ್ರ ರಾಘುವಯ್ಯನವ್ರ ಮಗಳು ಸರಿತಳಿಗೂ ದಿನಾಂಕ 12-6-2000 ರಲ್ಲಿ ಕೆಳಗಿನ ಗೌಡ ಸಮಾಜದಲ್ಲಿ ವಿಜೃಂಭಣೆಯಿಂದ ನಡೆಯಿತು.

---

# ಗೌಡ ಮಹಿಳಾ ಒಕ್ಕೂಟದ ದ್ವಿತೀಯ ವಾರ್ಷಿಕ ಮಹಾಸಭೆ ಮತ್ತು ವಾರ್ಷಿಕೋತ್ಸವ



ಮಹಿಳಾ ವಾರ್ಷಿಕ ಮಹಾ ಸಭೆ



ಶ್ರೀಮತಿ ಸರೋಜ ಜೀವಿಜಯರಿಂದ ಸಮಾರಂಭ ಉದ್ಘಾಟನೆ

ದಿನಾಂಕ 13-6-2000ರಲ್ಲಿ ಗೌಡ ಮಹಿಳಾ ಒಕ್ಕೂಟದ ದ್ವಿತೀಯ ವಾರ್ಷಿಕ ಮಹಾಸಭೆ ಮತ್ತು ದ್ವಿತೀಯ ವಾರ್ಷಿಕೋತ್ಸವವು ಮಡಿಕೇರಿಯ ಗೌಡ ಸಮಾಜದ ಕಟ್ಟಡದಲ್ಲಿ ಒಕ್ಕೂಟದ ಅಧ್ಯಕ್ಷಿಣಿಯಾದ ಶ್ರೀಮತಿ ಚೀಯಂಡಿರ ರಾಧ ಯಾಧವನವರಿಂದ ಬಾರಿ ವಿಜೃಂಭಣೆಯಿಂದ ನೆರವೇರಿತು.

ಕೊಡಗಿನ ಅಬ್ಬರದ ಮಳೆಗಾಲದ ಚಳಿಯಲ್ಲಿ ತುಂತುರು ಮಳೆರಾಯನ, ಮೋಡ ಕವಿದ ವಾತಾವರಣದಲ್ಲಿ ಮಹಿಳಾ ಒಕ್ಕೂಟದ ಸುಮಾರು ಸಾವಿರಕ್ಕೂ ಮಿಕ್ಕಿ ಮಹಿಳಾ ಲಲನೆಯರು ಆಗಮಿಸಿ ವಾರ್ಷಿಕೋತ್ಸವಕ್ಕೆ ಮೆರಗು ನೀಡಿರುವುದು ವಿಶೇಷ ವಾಗಿತ್ತು. ಮಕ್ಕಳು ಮರಿಗಳಲ್ಲದೆ ರಾಜ್ಯದ ವಿವಿದೆಡೆಗಳಿಂದ ಗೌಡ ಸಮಾಜದ ಬಂಧುಗಳು ಅತಿಥಿಗಳಾಗಿ ಆಗಮಿಸಿ ಕಾರ್ಯಕಲಾಪ ವನ್ನು ವೀಕ್ಷಿಸಿ ಯಶಸ್ವಿಯಾಗಿ ನಡೆಸಿಕೊಟ್ಟರು. ಈ ಸಭೆಯು ಸುರುವಿನಿಂದ ಹಿಡಿದು ಕೊನೆಯ ತನಕ ಸುಸೂತ್ರವಾಗಿ ಸದ್ದು ಗದ್ದಲವಿಲ್ಲದೆ ನಿಶಬ್ದವಾಗಿ ಆಲಿಸಿ ಲಾಲಿಸಿ ನಡೆಸಿಕೊಟ್ಟಿದೆ ಈ ಸಮಾರಂಭ.

ಬೆಳಿಗ್ಗೆ 10ಗಂಟೆಗೆ ಒಕ್ಕೂಟದ ಅಧ್ಯಕ್ಷಿಣಿಯಾದ ಚೀಯಂಡಿರ ರಾಧ ಯಾಧವರಿಂದ ವಾರ್ಷಿಕ ಮಹಾಸಭೆಯ ಕಾರ್ಯ ಕಲಾಪಗಳು ಆರಂಭವಾದವು. ಪ್ರಾರ್ಥನೆ ವರದಿ ವಾಚನ, ಮೃತಪಟ್ಟವರಿಗೆ ಸಂತಾಪ ಸೂಚನೆ, ಸಲಹೆ ಸೂಚನೆಗಳು ಅಡಿಟ್‌ವರಿದಿಯ ಮಂಡನೆ ಮತ್ತು ಅನುಮೋದನೆ ಇತ್ಯಾದಿಗಳ ಬಗ್ಗೆ ಕೂಲಂಕುಶವಾಗಿ ಚರ್ಚೆ ನಡೆಸಿ, ಮುಂದಿನ ಆಗು ಹೋಗುಗಳ ಬಗ್ಗೆ ಸಭೆಯಲ್ಲಿ ಚರ್ಚಿಸಿ ಮುಂದುವರಿದು ಅಧ್ಯಕ್ಷರ ಭಾಷಣ, ವಂದನಾರ್ಪಣೆಯೊಂದಿಗೆ ಸಭೆಯು ತನ್ನ ವಾರ್ಷಿಕ ಮಹಾಸಭೆಯ ವ್ಯವಹಾರವನ್ನು ಮುಗಿಸಿತು. ನಂತರ ನಡೆದ ದ್ವಿತೀಯ ವಾಷಿಕೋತ್ಸವದ ಅಧ್ಯಕ್ಷತೆಯನ್ನು ಸಮಾಜದ ಹಿರಿಯ ಮುತ್ಸದಿ; ನಿವೃತ್ತ ಉಪಾಧ್ಯಾಯಿನಿ ಅನುಭವಿ ಶ್ರೀಮತಿ ತೋಟಂಬೈಲು ಅಮ್ಮವ್ವನವರು ವಹಿಸಿದ್ದರು. ಮೊದಲಿಗೆ ಕೆದಂಬಾಡಿ ಜಯಶ್ರೀ ಮತ್ತು ಬಿಂದು ಅವರು ಪ್ರಾರ್ಥನೆ ಮಾಡಿದರು. ಪಂಜಿಪಳ್ಳ ಇಂದ್ರಾಕ್ಷಿ ವೆಂಕಪ್ಪನವರು ಸ್ವರಚಿತ ಸ್ವಾಗತ ಗೀತೆಯೊಂದಿಗೆ ವೇದಿಕೆಯಲ್ಲಿ ಆಸೀನರಾಗಿದ್ದ ಗಣ್ಯ ವ್ಯಕ್ತಿಗಳನ್ನು ಸ್ವಾಗಿತಿಸಿದರು. ಸಮಾರಂಭವನ್ನು ಜ್ಯೋತಿ ಬೆಳಗಿಸಿ ಉದ್ಘಾಟನೆ ಮಾಡಿದರು ಶ್ರೀಮತಿ ಸರೋಜ ಜೀವಿಜಯನವರು.

ವೇದಿಕೆಯಲ್ಲಿ ಜನಾಂಗದ ಪ್ರಪ್ರಥಮ ಕರ್ನಾಟಕ ರಾಜ್ಯದ ಮಾಜಿ ಮಂತ್ರಿಗಳಾದ ಶ್ರೀ ದಂಬೆಕೋಡಿ ಚಿಣ್ಣಪ್ಪನವರು, ಕೊಡಗು ಗೌಡ ಸಮಾಜದ ಅಧ್ಯಕ್ಷರಾದ ಶ್ರೀ ತೋಟಂಬೈಲು ನಾಣಯ್ಯನವರು, ಸಮಾಜ ಸೇವಕರು ಜನಾಂಗದ ನಾಯಕರು, ಪ್ರಜಾವೇದಿಕೆಯ ಅಧ್ಯಕ್ಷರು ಆದ ಸಂಪಾಜೆಯ ಶ್ರೀ ನಂಜೇಗೌಡನ ಎಸ್. ದೇವಿ ಪ್ರಸಾದ್‌ರವರು, ಮಾಜಿ ಶಾಸಕರಾದ ದಂಬೆಕೋಡಿ ಮಾದಪ್ಪನವರು, ಕೊಡಗು ಗೌಡ ವಿದ್ಯಾ ಸಂಘದ ಅಧ್ಯಕ್ಷರಾದ ಕುಯ್ಯಮುಡಿ ಪೂರ್ಣಯ್ಯನವರು, ಗೌಡ ಸಾಂಸ್ಕೃತಿಕ ಅಕಾಡೆಮಿ ಯ ಅಧ್ಯಕ್ಷರಾದ ತುಂತಜೆ ಗಣೇಶ್‌ರವರು, ಜನಾಂಗದ ಸಮಾಜ ಸೇವಕಿ, ರಾಜಕಾರಣಿ, ಚತುರೆ, ಬೆಳ್ತಂಗಡಿ ತಾಲೋಕಿನ ಶ್ರೀಮತಿ ಲೋಕೇಶ್ವರಿ ಗೌಡ ವಿನಯಚಂದ್ರನವರು, ಕೊಡಗು ಜಿಲ್ಲಾ ಪಂಚಾಯಿತಿ ನೂತನ ಸದಸ್ಯರಾಗಿ ಆಯ್ಕೆಯಾದ ಶ್ರೀಮತಿ ಕೋರನ ಗಂಗಮ್ಮ ಪೂಣಚ್ಚನವರು, ಹಿರಿಯ ಸಮಾಜ ಸೇವಕಿಯರಾದ ಶ್ರೀಮತಿ ಬೈಲೋಳಿರ ಮುತ್ತಮ್ಮ ಕಾರ್ಯಪ್ಪ ಮತ್ತು ಶ್ರೀಮತಿ ಯಾಲದಾಳು ಪೂವಮ್ಮ ಪೂವಯ್ಯನವರು ವೇದಿಕೆಯಲ್ಲಿ ಆಸೀನರಾಗಿದ್ದರು.

ಇದೇ ಸಂದರ್ಭದಲ್ಲಿ ಶ್ರೀ ತೋಟಂಬೈಲು ನಾಣಯ್ಯನವರು ಜನಾಂಗದ ಪ್ರತೀಕವಾದ ಜನಪದ ಸಾಹಿತ್ಯ ಗೌಡ ಸಂಸ್ಕೃತಿ

ಊರಿಗೆ ಬಂದವಳು, ನೀರಿಗೆ ಬಾರದೆ ಇರಿಕ್ಕಿಲ್ಲೆ



*ಮಹಿಳಾ ದ್ವಿತೀಯ ವಾರ್ಷಿಕೋತ್ಸವದಲ್ಲಿ ಪಾಲ್ಗೊಂಡ ಅತಿಥಿಗಳು:* ಎಡದಿಂದ ಬಲಕ್ಕೆ-ವರದಿ ವಾಚನ ಕೂಡಕಂಡಿ ಕಾವೇರಮ್ಮ, ಕುಳಿತಿರುವವರು ಶ್ರೀಮತಿ ಯಾಲದಾಳು ಪೂವಮ್ಮ, ಶ್ರೀಮತಿ ಲೋಕೇಶ್ವರಿ ಗೌಡ ವಿನಯಚಂದ್ರ, ಶ್ರೀಮತಿ ಕೋರನ ಗಂಗಮ್ಮ, ಸಮಾರಂಭದ ಅಧ್ಯಕ್ಷಿಣಿ ಶ್ರೀಮತಿ ತೋಟಂಬೈಲು ಅಮ್ಮವ್ವ ಶ್ರೀಮತಿ ಬೈಲೋಳಿರ ಮುತ್ತಮ್ಮ, ಸಮಾರಂಭವನ್ನುಉದ್ಘಾಟಿಸಿದ ಶ್ರೀಮತಿ ಸರೋಜ ಜೀವಿಜಯ, ಮಾಜಿಮಂತ್ರಿಗಳಾದ ದಂಬೆಕೋಡಿ ಚೆಣ್ಣಪ್ಪ, ಪ್ರಜಾವೇದಿಕೆಯ ಅಧ್ಯಕ್ಷರಾದ ಯನ್. ಯಸ್. ದೇವಿ ಪ್ರಸಾದ್,ಗೌಡ ಸಮಾಜದ ಅಧ್ಯಕ್ಷರಾದ ತೋಟಂಬೈಲು ನಾಣಯ್ಯ, ಸಾಂಸ್ಕೃತಿಕ ಅಕಾಡೆಮಿ ಅಧ್ಯಕ್ಷರಾದ ತುಂತಜೆ ಗಣೇಶ್ ಮತ್ತು ಮಾಜಿಶಾಸಕರಾದ ದಂಬೆಕೋಡಿ ಮಾದಪ್ಪನವರನ್ನು ಕಾಣಬಹುದು.

ಬಿಂಬಿತ ಸಂಗ್ರಹ ಲೇಖನ ಶ್ರೀಮತಿ ಬೈತಡ್ಕ ಜಾನಕಿ ರಚಿತ "ಹಸೆಮಣೆ" ಪುಸ್ತಕವನ್ನು ಜನಾಂಗದ ಪರವಾಗಿ ಬಿಡುಗಡೆ ಮಾಡಿದರು. ಶ್ರೀಯುತರು ಮಾತನಾಡಿ ಗೌಡ ಸಂಸ್ಕೃತಿಗೆ ಪುರಾತನ ಪರಂಪರೆಯಿದೆ. ವಿಸ್ತಾರವಾದ ಈ ಸಂಸ್ಕೃತಿಯು ಇತ್ತಿಚಿನ ದಿನಗಳಲ್ಲಿ ಅದರಲ್ಲು ನಗರ ಪ್ರದೇಶಗಳಲ್ಲಿ ನಶಿಸುತ್ತಿರುವ ಬಗ್ಗೆ ಆತಂಕ ವ್ಯಕ್ತ ಪಡಿಸಿದರು. ಕರ್ನಾಟಕ ಜಾನಪದ ಇತಿಹಾಸದಲ್ಲಿಯೇ ವಿಶಿಷ್ಠ ಸ್ಥಾನ ಹೊಂದಿರುವ ಕೊಡಗು ಗೌಡ ಸಂಸ್ಕೃತಿಯನ್ನು ಗ್ರಾಮೀಣ ಪ್ರದೇಶ ಮತ್ತು ನಗರ ಪ್ರದೇಶಗಳಲ್ಲಿ ಶಾಶ್ವತವಾಗಿ ನಮ್ಮತನ, ಸ್ವಂತಿಕೆಯನ್ನು ಉಳಿಸಿಕೊಳ್ಳುವ ನಿಟ್ಟಿನಲ್ಲಿ ನಮ್ಮ ಬಾಂಧವರೆಲ್ಲರು ಪ್ರಯತ್ನಿಸಿ ಕಾಪಾಡಿಕೊಳ್ಳಬೇಕೆಂದು ಕರೆ ನೀಡಿದರು.

ಇನ್ನೊರ್ವ ಅತಿಥಿ ಮಾಜಿ ಸಚಿವ ದಂಬೆಕೋಡಿ ಚಿಣ್ಣಪ್ಪನವರು ನಮ್ಮ ಅರೆಭಾಷೆ ಮಾತನಾಡುವ ಜನಾಂಗದಲ್ಲಿ ಅದರಲ್ಲೂ ಸ್ತ್ರೀಯರು ಕೀಳುತನದ ಭಾವನೆಯನ್ನು ರೂಢಿಸಿಕೊಳ್ಳದೇ ನಮ್ಮ ಮಹಿಳೆಯರು ರಾಜಕೀಯದಲ್ಲಿ ಮುಂದೆ ಬರಬೇಕು. ತಮ್ಮ ಪ್ರತ್ಯೇಕ ಅಸ್ಥಿತ್ವವನ್ನು ಉಳಿಸಿಕೊಳ್ಳುವ ಮೂಲಕ ರಾಜಕೀಯ ಕ್ಷೇತ್ರವು ಸೇರಿದಂತೆ ವಿವಿಧ ಕ್ಷೇತ್ರಗಳಲ್ಲಿ ಪ್ರಾತಿನಿಧ್ಯಕ್ಕಾಗಿ ಪ್ರಯತ್ನಿಸಬೇಕು. ರಾಜಕೀಯ ಕ್ಷೇತ್ರದಿಂದ ಗೌಡ ಜನಾಂಗವನ್ನು ನಿರ್ಲಕ್ಷಿಸಲಾಗುತ್ತದೆ. ಒಕ್ಕಲಿಗ ಜನಾಂಗಕ್ಕೆ ಪ್ರಾತಿನಿಧ್ಯ ಕಲ್ಪಿಸುವ ಮೂಲಕ ಅರೆಭಾಷೆ ಗೌಡ ಜನಾಂಗವನ್ನು ತೃಪ್ತಿ ಪಡಿಸುವ ಪ್ರಯತ್ನ ನಡೆಯುತ್ತದೆ ಎಂದು ವಿಷಾಧಿಸಿದರು. ಅರೆಭಾಷೆಯನ್ನು ಎತ್ತಿ ಹಿಡಿಯಬೇಕು, ರಾಜಕೀಯವಾಗಿ ಮುಂದೆ ಬಂದು ನಮ್ಮದೆ ಭಾಷೆಯ ಆಧಾರದಲ್ಲಿ ಸಾಧನೆ ಮಾಡಬೇಕು. ಅಂಜಿಕೆ, ನಾಚಿಕೆ ಬಿಟ್ಟು, ಶಕ್ತಿಯನ್ನು ಬರಿಸಬೇಕು. ಬೇರೆ ಬೇರೆ ವಿಧಗಳಲ್ಲಿ ಅಭಿವೃದ್ಧಿಯಾಗಬೇಕು. ಮಹಿಳಾ ಒಕ್ಕೂಟದ ಶಾಖೆಗಳು ಹಳ್ಳಿ ಹಳ್ಳಿಗಳಲ್ಲಿ ಆಗಿ ಹಳ್ಳಿಯನ್ನು ದತ್ತು ತೆಗೆದುಕೊಂಡು ಅಭಿವೃದ್ಧಿ ಪಡಿಸಬೇಕು. ಹೆಣ್ಣನ್ನು ಕಡೆಗಣಿಸಿದಾಗ ಅವಳು ಸಹಜವಾಗಿ ಬಲಹೀನವಾಗುತ್ತಾಳೆ. ಯೋಜನಾತ್ಮಕ, ಕ್ರೀಯಾತ್ಮಕವಾಗಿ ಮುಂದುವರಿಯಬೇಕೆಂದು ಸಲಹೆ ನೀಡಿದರು.

ಮಗದೊಬ್ಬ ಅತಿಥಿ ದಂಬೆಕೋಡಿ ಮಾದಪ್ಪನವರು ಮಾತನಾಡಿ ಆಧುನಿಕತೆಯಲ್ಲಿ ರಾಜಕೀಯ ರೈತಾಪಿ ಜನಾಂಗದ



ಗಾಳಿಬೀಡಿನ ಪ್ರೇಮಾ ತಂಡದವರಿಂದ ಭತ್ತಕುಟ್ಟುವುದು

ಶೇ 95% ರೈತರಾಗಿ ಕೃಷಿಯನ್ನು ಅವಲಂಭಿಸಿ ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿದ್ದಾರೆ. ಉತ್ತಮ ಗೌಡ ಸಮಾಜ ನಿರ್ಮಾಣವಾಗಬೇಕಾದರೆ ಗೌಡ ಮಹಿಳೆಯರು ವಿದ್ಯೆಯಲ್ಲಿ ಹೆಚ್ಚಿನ ಶಿಕ್ಷಣ ಪಡೆದು ಸ್ವಾವಲಂಬಿಗಳಾಗಬೇಕಾಗಿದೆ ಎಂದು ತಿಳಿಸಿದರು. ಇತ್ತೀಚಿನ ದಿನಗಳಲ್ಲಿ ನಡೆಯುತ್ತಿರುವ ಆಸ್ತಿ ವೈಷಮ್ಯ ಕೌಟುಂಬಿಕ ಕಲಹಗಳನ್ನು ತಡೆಗಟ್ಟುವಲ್ಲಿ ಪ್ರಮುಖ ಪಾತ್ರ ವಹಿಸಬಹುದಾದ ಮಹಿಳೆ ಜನಾಂಗದ ಸಂಸ್ಕೃತಿಯನ್ನು ನಿರಂತರವಾಗಿ ಕಾಪಾಡಿಕೊಳ್ಳುವ ಮೂಲಕ ಶಕ್ತಿ ಶಾಲಿ ಸಮಾಜ ನಿರ್ಮಾಣಕ್ಕೆ ಸಹಕರಿಬೇಕೆಂದು ಕರೆ ನೀಡಿದರು.

ಮತ್ತೊಬ್ಬ ಮುಖ್ಯ ಅತಿಥಿ ತುಂತಜೆ ಗಣೇಶ್‌ನವರು ಮಾತನಾಡುತ್ತಾ ಹತ್ತು ಕುಟುಂಬ ಹದಿನೆಂಟು ಗೋತ್ರದ ಅರೆಭಾಷೆಗೌಡರು ಬಹಳ ಹಿಂದುಳಿದಿದ್ದಾರೆ, ಭಾಷೆಗೆ ಪ್ರಾಮುಖ್ಯತೆ ನೀಡಬೇಕು, ಸಂಸ್ಕೃತಿಗೆ ಆಧ್ಯತೆ ಕೊಡಬೇಕು, ಭವಿಷ್ಯತ್ತಿನಲ್ಲಿ ಉಜ್ವಲವಾಗಿ ಬೆಳೆಯಲು ಪ್ರಯತ್ನಿಸಬೇಕು, ಮಹಿಳೆಯರು ಸಾವಿರ ಸದಸ್ಯರಿಕ್ಕಿಂತಲೂ ಹೆಚ್ಚು ನೊಂದಾಯಿಸಲು ಸಾಧ್ಯವಾಗಿದೆ. ನಾವಿನ್ನು ಇನ್ನೂರ ಐವತ್ತರ ಸದಸ್ಯರನ್ನು ನೊಂದಾಯಿಸಲು ಮಾತ್ರ ಸಾಧ್ಯವಾಗಿದೆ. ಮಹಿಳೆಯರ ಸಾಹಸವನ್ನು ಮೆಚ್ಚತಕ್ಕದು, ಈ ವರ್ಷದ ಕೊನೆಯಲ್ಲಿ ಕೊಡಗು ಮತ್ತು ದ. ಕನ್ನಡ ಗೌಡರು ಸೇರಿ ಸಮ್ಮೇಳನ ನಡೆಸುವ ಕಾರ್ಯಕ್ರಮವನ್ನು ಹಾಕಿಕೊಂಡಿದ್ದೇವೆ. ಜನಾಂಗದ ಎಲ್ಲಾ ಸಮಾಜಗಳ ಸಹಕಾರವನ್ನು

**ಸತ್ತ ಹಸ್‌ಗೆ ಹಾಲ್ ಹೆಚ್ಚ್ ಗಡ**

ಸದ್ಯದಲ್ಲಿ ಕೋರಲಿದ್ದೇವೆ. ವಿವಿಧತೆಯಲ್ಲಿ ಏಕತೆಯನ್ನು ಭಾಷೆಯಿಂದ ನಮ್ಮ ಜನಾಂಗವನ್ನು ಒಗ್ಗೂಡಿಸಲು ಮಾತ್ರ ಸಾಧ್ಯವಿದೆ ಎನ್ನುವ ಕಟು ಸತ್ಯದ ಅರಿವು ಮೂಡಿಸಿದರು.

ಅತಿಥಿಗಳಲ್ಲಿ ಪ್ರಮುಖರಾದ ಸಂಪಾಜೆಯ ಸಾಹಿತಿ, ಸಮಾಜ ಸೇವಕ ಎನ್. ಎಸ್. ದೇವಿಪ್ರಸಾದ್ ಅವರು ಮಾತನಾಡುತ್ತ ಗೌಡ ಜನಾಂಗದ ಪ್ರಬಲ ಸಂಘಟನೆಗೆ ಅರೆಭಾಷಿಕ ಒಕ್ಕಲಿಗ ಹಾಗೂ ತುಳು ಭಾಷೆ ಗೌಡರು ಒಂದಾಗ ಬೇಕಿದ್ದು, ಈ ಸಂಭಂಧ ಭಾಂದವರಲ್ಲಿ ಚಿಂತನೆಯಾಗ ಬೇಕೆಂದರು. ಹೆಣ್ಣು ಶಕ್ತಿ ರೂಪಿಣಿ, ಅವಳಿಗೆ ಬೆಲೆ ಕೊಡಬೇಕು. ಬ್ರಿಟಿಷರ ಒಡೆದು ಆಳುವ ನೀತಿಯಿಂದ ತತ್ತರಿಸಿದ ಅರೆಭಾಷೆ ಗೌಡರ ಕೀರ್ತಿ ಪತಾಕೆಯನ್ನು ಚಿಣ್ಣಪ್ಪನವರ ಆಗಮನದ ನಂತರ ಗೌಡರು ಬೇರೆ ಅನ್ನುವ ವಿಚಾರ ಕಮ್ಮಿಯಾಗಿದೆ. ಮುಂದೆ ಮಡಿಕೇರಿಯಲ್ಲಿ ಸಮ್ಮೇಳನ ಮಾಡುವ ವಿಚಾರ ಬಹಳ ಕುಷಿಯನ್ನು ನೀಡಿದೆ. ಇದು ಸಂಭ್ರಮದಿಂದ ನಡೆಯಬೇಕು, ಎಲ್ಲರನ್ನು ಸೇರಿಸಿ ಮುನ್ನಡೆಯಬೇಕು, ಇದು ಬ್ರಿಟಿಷರ ಪರ ಹೋರಾಡಿದವರ ವಿರುದ್ಧ ಅಲ್ಲ, ನಮ್ಮದೆ ರೀತಿಯಲ್ಲಿ ಸೋಬಾನೆ ಸ್ಪರ್ಧೆ ಹಸೆ ಬರೆಯುವ ಸ್ಪರ್ಧೆ ಮುಂತಾದವು ಏರ್ಪಡಿಸಬೇಕು. ಮೂರು ತಾಲೋಕಿನ ಒಕ್ಕಲಿಗ ಜನಾಂಗ ಒಂದಾಗಿ ಸೇರಿ ಏರ್ಪಡಿಸಿ, ಒಗ್ಗಟ್ಟಿನಲ್ಲಿ ಮುಂದೆ ಹೋಗೋಣ ಬೇರೆ ಬೇರೆಯಾಗಿ ಹೋಗುವುದು ಸರಿಯಲ್ಲವೆಂದರು.

ಸಭೆಯಲ್ಲಿ ಕುಯ್ಯಮುಡಿ ಪೂರ್ಣಯ್ಯನವರು, ಜಿಲ್ಲಾ ಪಂಚಾಯಿತಿಯ ನೂತನ ಸದಸ್ಯೆ ಕೋರನ ಗಂಗಮ್ಮನವರು, ಕನ್ನಡ ಜಿಲ್ಲಾ ಗೌಡ ಮಹಿಳಾ ಒಕ್ಕೂಟದ ಕಾರ್ಯದರ್ಶಿ ಲೋಕೇಶ್ವರಿ ಗೌಡ ವಿನಯ ಚಂದ್ರನವರು, ಬೈಲೋಳಿರ ಮುತ್ತಮ್ಮ ಕಾರ್ಯಪ್ಪನವರು, ಯಾಲದಾಳು ಪೂವಮ್ಮನವರು ಜನಾಂಗದ ಜಾನಪದ ಲೋಕದಲ್ಲಿ ಪ್ರತಿಷ್ಠಿತ ಸ್ಥಾನ ಪಡೆದಿರುವ ಸಂಪ್ರದಾಯ ಬದ್ಧ ಗೌಡ ಜನಾಂಗದ ಮೂಲ ಸಂಸ್ಕೃತಿ ಮತ್ತು ಆಚಾರ ವಿಚಾರಗಳು ಇತ್ತೀಚಿನ ದಿನಗಳಲ್ಲಿ ನಶಿಸುತ್ತಿರುವ ಬಗ್ಗೆ ಆತಂಕ ವ್ಯಕ್ತಪಡಿಸಿರುವ ಜನಾಂಗದ ಪ್ರಮುಖರು ನಮ್ಮ ಸಂಸ್ಕೃತಿಯನ್ನು ಶಾಶ್ವತವಾಗಿ ಉಳಿಸಿಕೊಳ್ಳುವುದರೊಂದಿಗೆ ಮುಂದಿನ ಪೀಳಿಗೆಗೆ ರವಾನಿಸುವ ಅಗತ್ಯತೆಯ ಅವಶ್ಯಕತೆಯಿದೆ ಎಂದು ಅಭಿಪ್ರಾಯ ಪಟ್ಟರು. ಅಧ್ಯಕ್ಷತೆ ವಹಿಸಿದ್ದ ತೋಟಂಬೈಲು ಅಮ್ಮವ್ವ ಕುಶಾಲಪ್ಪನವರು ಜನಾಂಗ ಹಾಗೂ ಸಂಸ್ಕೃತಿಯ ಬಗ್ಗೆ ದೀರ್ಘವಾಗಿ ಮಾತನಾಡಿ ಗೌಡ ಮಹಿಳಾ ಒಕ್ಕೂಟವು ಅಭಿವೃದ್ಧಿಯಲ್ಲಿ ಪ್ರಮುಖಪಾತ್ರ ವಹಿಸಲೆಂದು ಈ ಸಂದರ್ಭದಲ್ಲಿ ಶುಭವನ್ನು ಹಾರೈಸಿದರು.

ಗೌಡ ಸಂಸ್ಕೃತಿಯನ್ನು ಬಿಂಬಿಸುವ ನಿಟ್ಟಿನಲ್ಲಿ ರಚಿತಗೊಂಡ "ಹಸೆಮಣೆ" ಪುಸ್ತಕ ಲೇಖಕರಾದ ಶ್ರೀಮತಿ ಬೈತಡ್ಕ ಜಾನಕಿಯವರು ಮಾತನಾಡಿ, ನಮ್ಮ ಜನಾಂಗದ ಸಂಸ್ಕೃತಿಯನ್ನು ಉಳಿಸಿ ಶಾಶ್ವತವಾಗಿ ಮುಂದಿನ ಪೀಳಿಗೆಗೆ ರವಾನಿಸುವ ಸಂಭಂಧ ಈ ಪುಸ್ತಕವನ್ನು ಹಿರಿಯರ ಆಶೀರ್ವಾದದಿಂದ ರಚಿಸಿರುವುದಾಗಿ ಅಭಿಪ್ರಾಯಪಟ್ಟರು. ಸಭೆಯನ್ನು ಒಕ್ಕೂಟದ ಅಧ್ಯಕ್ಷೆ ಚೀಯಂಡಿ ರಾಧ ಯಾಧವ ಸ್ವಾಗತಿಸಿದರೆ, ಕಾರ್ಯದರ್ಶಿನಿ ಕೂಡಕಂಡಿ ಕಾವೇರಮ್ಮ ಸೋಮಣ್ಣನವರು ವಂದಿಸಿದರು. ಲಾಟರಿ ಯೋಜನೆಯಲ್ಲಿ ಬಹುಮಾನವಿದ್ದದಲ್ಲದೆ, ಈ ಸಮಾರಂಭಕ್ಕೆ ಹೆಚ್ಚಿನ ಕಳೆ ನೀಡಿರುವುದು ಶ್ರೀಮತಿ ಕಟ್ರತನ ದಮಯಂತಿಯವರ ಉತ್ತಮವಾದ ಸಂದರ್ಭಯೋಚಿತವಾದ ನಿರೂಪಣೆಯಾಗಿತ್ತು.

ಊಟದ ನಂತರ ಸಾಂಸ್ಕೃತಿಕ ಕಾರ್ಯಕ್ರಮ ತುಂಬಾ ಚೆನ್ನಾಗಿತ್ತು. ಅದರಲ್ಲೂ ಗಾಳಿಬೀಡುವಿನ ಕೋಳುಮುಡಿಯನ ಪ್ರೇಮ ಅನಂತ್ ತಂಡದವರಿಂದ ಹೊಸ ಭತ್ತ ಕುಟ್ಟುವುದು, ಸುಗ್ಗಿ ಸುವ್ವಾಲೆ ವಂದೇ ಮಾತರಂ, ಭಾಗಮಂಡಲದ ಮಿಲನ್ ಭರತ್ ತಂಡದವರ ನಾಟಕ ಮತ್ತು ಇನ್ನಿತರ ಹಲವಾರು ಕಾರ್ಯಕ್ರಮಗಳು ನೆರೆದವರಿಗೆ ಮುದ ನೀಡಿದವು.

"ಜೈ ಗೌಡ ಮಹಿಳಾ ಬಾಂಧವರೆ"

---

## Collegeನ್ನು Call-age

ಇಂದಿನ ವಿದ್ಯಾರ್ಥಿಗಳ ಶಿಕ್ಷಣ ಮಟ್ಟ ಅಧಃ ಪತನಕ್ಕೆ ಇಳಿಯುತ್ತಿದೆ. Collegeನ್ನು Call-age ಎಂದು ಭಾವಿಸಿಕೊಂಡು, ವಯಸ್ಸು ತಮ್ಮನ್ನು ಕರೆದು ಕೊಳ್ಳುತ್ತಾ ಇದೆ; ಎಂದು ತಿಳಿದಿದ್ದಾರೆ. ತಾವು ಕಾಲೇಜ್‌ಗೆ ತಲುಪಿದ ಕೂಡಲೇ ತಾವು ಮಹಾವಿದ್ವಾಂತರು, ಮಹಾಜ್ಞಾನಿಗಳು ಎಂದು ಭ್ರಮಿಸಿಕೊಂಡಿದ್ದಾರೆ.

ಇನ್ನು ಬಸ್ಸ್, ರೋಡ್ ಎಲ್ಲಾ ವಿದ್ಯಾರ್ಥಿಗಳಿಗೆ ಬಸ್ಸ್‌ನಲ್ಲಿ ಯಾರ್‍ಯಾರ ಬಗ್ಗೆಯೋ ಆಡಿಕೊಳ್ಳುವುದು. ಕುಳಿತು ಕೊಳ್ಳಲು ಸ್ಥಳ ಸಿಕ್ಕಿತೆಂದರೆ ಸಾಕು ತಮ್ಮ ಸ್ನೇಹಿತರುಗಳಿಗೆ ಸ್ಥಳ ಕಾಯ್ದಿರಿಸಿಕೊಳ್ಳುವುದು. ಮಕ್ಕಳನ್ನು ಎತ್ತಿಕೊಂಡು ಬಸ್ಸ್ ಹತ್ತುವವರ ಗೋಳೆ ಸರಿ. ವಿದ್ಯಾರ್ಥಿಗಳು ಬಸ್ಸ್‌ನಲ್ಲಿ ಇಲ್ಲದಿದ್ದರೆ ಮಾತ್ರ ಅವರು ಬಸ್ಸ್ ಹತ್ತಬೇಕು. ಇಲ್ಲವಾದರೆ ಖಂಡಿತಾ ಸ್ಥಳ ಸಿಗೋಲ್ಲ. ಇನ್ನು ಹಿರಿಯರು, ಉಪನ್ಯಾಸಕರು, ಇವರುಗಳ ಬಗ್ಗೆ ತಲೆಕೆಡಿಸಿಕೊಳ್ಳುವುದೇ ಇಲ್ಲ. ಇಂಥವರಿಗೆ ಶಿಕ್ಷೆ ಆಗುವುದಿಲ್ಲವೆ?

ವಿದ್ಯಾರ್ಥಿಗಳು ತಿಳಿದುಕೊಂಡಿರುವ ಹಾಗೆ College ವ್ಯವಸ್ಥೆ ಆಗದೆ, ತಮ್ಮನ್ನು ವಯಸ್ಸು ಕರೆದುಕೊಳ್ಳುತ್ತಾ ಇದೆ. ಯಾವ ಕಡೆಗೆ? ಏತಕ್ಕಾಗಿ? ಎಂಬ ಪ್ರಶ್ನೆ ಉದ್ಭವಿಸಬೇಕು. ಆಗ ಮಾತ್ರ ಅವರ ಅಭಿವೃದ್ಧಿ ಸಾಧ್ಯ. ತಮ್ಮ ವಯಸ್ಸನ್ನು ಒಳ್ಳೆಯ ಯೋಜನೆಗೆ, ಯಶಸ್ಸಿಗೆ, ಸಾಧನೆಗಾಗಿ ಕೈಗೊಳ್ಳಬೇಕು. ಆಗ ಮಾತ್ರ Co(a)lle(a)geನ ಅರ್ಥ ಸಾರ್ಥಕವಾಗಬಹುದು.

ಅದು ಬಿಟ್ಟು ನಾನು ಎಂಬ 'ಅಹಂ' ಇರಿಸಿಕೊಂಡರೆ, ನೀರ ಮೇಲಿನ ಗುಳ್ಳೆಯಾಗಲು ಮಾತ್ರ ಸಾಧ್ಯ.

— ಗೀತಾ ಎಡಿಕೇರಿ, ಕೊಡಗು

---

ಆನೆ ಕಂಡರೆ ಹರ್‍ಮರ ಹತ್ತಿದಂಗೆ

## ಸಂಗಾತಿ ಭವಿಷ್ಯ : ಜುಲೈ 1 ರಿಂದ 15, 2000

ಜೋತಿಷ್ಯರು : ಗಿರೀಶ್‌ಕುಮಾರ್, ಕೊಯನಾಡು

**ಮೇಷ ರಾಶಿ** : ದೈವಾನುಕೂಲವಿದೆ. ಹಣಕಾಸಿನ ವ್ಯವಹಾರದಲ್ಲಿ ಸ್ವಲ್ಪ ಮಟ್ಟಿಗೆ ನೆಮ್ಮದಿ. ಸಂಸಾರದಲ್ಲಿ ಸುಖ ಶಾಂತಿ ನೆಲೆಸುವುದು. ಆರೋಗ್ಯ ಉತ್ತಮಗೊಳ್ಳುವುದು. ಪಂಚೇಂದ್ರಿಯಗಳಿಗೆ ಕಡಿವಾಣ ಹಾಕಿ ವ್ಯವಹರಿಸಿ.

**ವೃಷಭ ರಾಶಿ** : ಅನಾರೋಗ್ಯ ಸಂಭವವಿದೆ. ವ್ಯರ್ಥ ಪ್ರಯಾಣದಿಂದ ತೊಂದರೆಯಿದೆ. ಕಲಹಗಳು ಉಂಟಾಗುವುದು. ಸಂಸಾರದಲ್ಲಿ ಶಾಂತಿ ಇರುವುದಿಲ್ಲ. ಮನಸ್ಸಿಗೆ ಅಘಾತ.

**ಮಿಥುನ ರಾಶಿ** : ಮಾನಸಿಕ ಅಶಾಂತಿ ಪಿತ್ತಸಂಬಂಧ ರೋಗ ಬರಬಹುದು. ಸಂಸಾರದಲ್ಲಿ ಕಲಹವೇರ್ಪಡುವ ಸಂಭವವಿದೆ. ಘನತೆ ಗೌರವಗಳಿಗೆ ದಕ್ಕೆ ಬರಲಿದೆ. ಅನಾವಶ್ಯಕ ಪ್ರಯಾಣದಿಂದ ನಷ್ಟ.

**ಕರ್ಕಾಟಕ ರಾಶಿ** : ಆರೋಗ್ಯ ಸುದಾರಿಸುವುದ. ಖರ್ಚು-ವೆಚ್ಚಗಳು ಹೆಚ್ಚುವುದು. ನೇತ್ರಬಾದೆ ಸಂಭವಿಸಬಹುದು. ಹಣಕಾಸಿನ ವ್ಯವಹಾರದಲ್ಲಿ ಲಾಭವಿದೆ. ಸಂಸಾರದಲ್ಲಿ ಸ್ವಲ್ಪ ಮಟ್ಟಿಗೆ ನೆಮ್ಮದಿ ಇರುವುದು.

**ಸಿಂಹ ರಾಶಿ** : ಸ್ಥಾನಮಾನಗಳಿಗೆ ಕೊರತೆಯಿಲ್ಲ. ಹಣಕಾಸಿನ ವ್ಯವಹಾರದಲ್ಲಿ ಲಾಭವಿದೆ ಬರಬೇಕಿದ್ದ ಹಣ ಕೈಸೇರುವುದು. ಭೂಸಂಬಂದ ವ್ಯವಹಾರದಲ್ಲಿ ಲಾಭವಿದೆ. ಸಂಸಾರದಲ್ಲಿ ನೆಮ್ಮದಿ ಇರುವುದು.

**ಕನ್ಯಾ ರಾಶಿ** : ಆಸ್ತಿ-ಪಾಸ್ತಿ ವ್ಯವಹಾರದಲ್ಲಿ ಕಲಹ. ಮನಸ್ಸು ಅಲ್ಲೋಲ, ಕಲ್ಲೋಲವಾಗಿ ನೆಮ್ಮದಿ ಇರಲಾರದು ಹಣಕಾಸಿನ ವ್ಯವಹಾರದಲ್ಲಿ ಸ್ವಲ್ಪ ಮಟ್ಟಿಗೆ ಲಾಭವಿದೆ. ಉದ್ಯೋಗದಲ್ಲಿ ಕಿರಿಕಿರಿ ಉಂಟಾದೀತು.

**ತುಲಾ ರಾಶಿ** : ಸಂಸಾರದಲ್ಲಿ ನಿಷ್ಠುರದ ಮಾತ್ರುಗಳನ್ನು ಕೇಳಲಿದ್ದೀರಿ. ಆರೋಗ್ಯ ಹದಗೆಡುವ ಸಂಬವವಿದೆ. ಮೇಲಾಧಿಕಾರಿಗಳ ಕೋಪಕ್ಕೆ ತುತ್ತಾಗುವುರಿ, ಶಾಂತ ಸ್ವಭಾವದಿಂದ ವರ್ತಿಸಿ.

**ವೃಶ್ಚಿಕ ರಾಶಿ** : ಆರೋಗ್ಯ ಕ್ಷೀಣಿಸುವುದು ಅಧಿಕಾರಿಗಳ ಕಿರಿಕಿರಿಯಿಂದ ನೆಮ್ಮದಿ ಇರಲಾರುದು ಅನಾವಶ್ಯಕ ಕಲಹಗಳಿಗೆ ಆಸ್ಪದ ಕೊಡಬೇಡಿ, ಹಣಕಾಸಿನ ವ್ಯವಹಾರದಲ್ಲಿ ಸ್ವಲ್ಪ ಮಟ್ಟಿಗೆ ಲಾಭಾವಾಗಲಿದೆ.

**ಧನಸ್ಸು ರಾಶಿ** : ಸಕಲ ಕಾರ್ಯಗಳಲ್ಲಿ ಜಯ ಸಿಗುವುದು. ಆರೋಗ್ಯ ಉತ್ತಮ ಗೊಳ್ಳುವುದ. ಮಾನಸಿಕ ನೆಮ್ಮದಿ ಇರುವುದು. ಆದರೆ ವ್ಯವಹಾರದಲ್ಲಿ ಅಡ್ಡಿ ಆತಂಕಗಳು ಬರಬಹುದು.

**ಮಕರ ರಾಶಿ** : ಆರೋಗ್ಯ ಸುದಾರಿಸುವುದು, ಮನಸ್ಸಿನಲ್ಲಿರುವ ಚಿಂತೆಯನ್ನು ದೂರಮಾಡುವುದರಿಂದ ಸುಖ ಶಾಂತಿ ಸಿಗುವುದು. ಶತ್ರುಗಳು ದೂರಾಗುವುದರಿಂದ ಕೆಲಸ-ಕಾರ್ಯಗಳಲ್ಲಿ ಜಯ.

**ಕುಂಭ ರಾಶಿ** : ದೇಹದಲ್ಲಿ ಅನಾರೋಗ್ಯ ಕಾಡಲಿದೆ. ಸ್ತ್ರೀಸಂಬಂಧ ಸುಖಕ್ಕೆ ದಕ್ಕೆ ಇರುವುದು. ಕೆಳಮಟ್ಟದವರಿಂದ ಅಪವಾದ ಕೇಳಲಿದ್ದೀರಿ ಅನಾವಶ್ಯಕ ಕಲಹಕ್ಕೆ ಆಸ್ಪದ ಕೊಡದಿರಿ. ಶನಿ ಜಪ ಮಾಡಿ.

**ಮೀನ ರಾಶಿ** : ಸಂಸಾರದಲ್ಲಿ ನೆಮ್ಮದಿ ನೆಲೆಸುವುದು. ಶತ್ರುಗಳ ಉಪಟಳ ಕಡಿಮೆಯಾಗುವುದು. ಮನಸ್ಸಿನಲ್ಲಿರುವ ಗುಪ್ತ ವಿಷಯಗಳನ್ನು ಕೈಬಿಡವುದರಿಂದ ಉಪಯೋಗವಿದೆ. ಹೊಸ ಸ್ನೇಹಿತರ ಆಗಮನದಿಂದ ಮನಸ್ಸಿಗೆ ನೆಮ್ಮದಿ ವಿಷ್ಣುವನ್ನು ಆರಾಧಿಸುವುದರಿಂದ ಒಳಿತಾಗುವುದು.

---

## ಕೊಡಗು ಸಂಗಾತಿಯನ್ನು ಉಳಿಸಿ

**K** : ಕೊಡಗಿನ ಏಕೈಕ ಗೌಡ ಪತ್ರಿಕೆ
**O** : ಒಬ್ಬ ವ್ಯಕ್ತಿಯ ಸಾಧನೆಯ ಪತ್ರಿಕೆ
**D** : ದೊಡ್ಡ ಜನರೇ ಮುನಿಸಿಕೊಳ್ಳಬೇಡಿ
**A** : ಅಂತಹ ತಪ್ಪು ಮಾಡಿಲ್ಲ ಸಂಗಾತಿ
**G** : ಗೌಡ ಜನರ ನಿದ್ರೆ ಬಿಡಿಸುತ್ತಿದೆ ಅಷ್ಟೆ
**U** : ಊರೂರಿಗೆ ತಲುಪುವ ಪತ್ರಿಕೆ

**S** : ಸೈನಿಕನ ಸಾಹಸದ ಸಾಧನೆಯ ಪತ್ರಿಕೆ
**A** : ಅಂದ ಚೆಂದದ ಅರೆಭಾಷಿಕರ ಪತ್ರಿಕೆ
**N** : ನಾಡಿನಲ್ಲಿ ಸಂಗಾತಿಯದೇ ಚರ್ಚೆ
**G** : ಗೌಡ ಜನರೇ ಇದರ ಬಗ್ಗೆ ಗಮನ ಕೊಡಿ
**A** : ಅದನ್ನು ಜೀವಂತವಾಗಿಡಲು ಸಹಕರಿಸಿ
**T** : ತನ್ನದೊಂದಿಷ್ಟು ಸಂಗಾತಿಗೆ ಕಾಣಿಕೆ ನೀಡಿ
**H** : ಹೆಚ್ಚೇನು ಕೇಳುತ್ತಿಲ್ಲ ಸಂಗಾತಿ,
**I** : ಇಂತಹ ಪತ್ರಿಕೆಯ ಉದ್ಧಾರಕ್ಕಾಗಿ
ಚಂದದಾರಾಗಿರಿ ಅಷ್ಟೆ ಸಾಕು
ಧನಸಹಾಯ ಬೇಡ, ಚಿಂತಿಲ್ಲ
ಆದರೆ ಚಂದದಾರರಾಗಲು ಮರೆಯದಿರಿ

ಕೊಡಲಿಂಗನ ಮೇದಪ್ಪ (ಮಾ. ಸೈ) ಮೈಸೂರು

---

ಅಹಂಕಾರಕ್ಕೆ ಉದಾಸೀನವೆ ಮದ್ದು

# ವಾಂಟೆಡ್ ಮಿಸ್ಟರ್ ರಾಜು [ನಮ್ಮ ರಾಜು ಮಂಜನ ಕಥೆ]

**ಧಾರಾವಾಹಿ -13**

**ಹಿಂದೆ ನಡದದ್.......**

Mr. ರಾಜು ಸನ್ಯಾಸಿಗೆ ಮೋಸ ಮಾಡಿ ಅವನ ವೇಷನ ಒಂದ್ ದಿನ ಹಾಕಂಡದೆ. ಮಾರನೇದಿನ ಪೋಲಿಸ್ ಕಾನ್‌ಸ್ಟೇಬಲ್ ಡ್ರಸ್‌ನ ಹಾಕಂಡ್ ಕೂರ್ಗಳ್ಳಿ ರೋಡ್‌ಲಿ ರಾತ್ರಿ ಹೋಗ್ವ ಬರ್‍ವ ಲಾರಿಬಸ್ಸುಗಳ ಚೆಕ್ಕಿಂಗ್ ಮಾಡಿಕಂಡ್ ಅಲ್ಲಿ ಸ್ವಲ್ಪ ಸಂಪಾದನೆ ಮಾಡ್ದೆ. ಆದ್ರೆ ಇದರ ಮಧ್ಯೆ ದೂರ್‌ಲಿ ಕತ್ತಲೆ ಒಳಗೆ ಒಂದ್ ಹೆಣ್ಣ್‌ನ ಅಸಾಯಕ ಕೂಗ್ ಕೇಳ್ದೇ

ಮುಂದಕೆ...........

ದಫೆದಾರ ರಾಜು ಆ ಬುಲ್ಲೆಟ್ ಬೈಕ್‌ನ ಗೌಡ್ರ ಹತ್ರ ಹೋತ್. ಗೌಡ್ರೇ ನೋಡಿ ಅಲ್ಲಿ ಕತ್ತಲೆ ಒಳಗೆ ಯಾವುದೋ ಒಂದು ಹೆಣ್ಣು ಹೆಂಗ್ಸ್ ಕಿರುಚಾಡುತ್ತಿರುವ ಸದ್ದ್ ಕೇಳ್ಸತಾ ಉಟ್ಟು. ನಿಮಿಗೆ ಕೇಳ್ಸತಾ ಉಟ್ಟಾತ ಕೇಳ್ತ್. ಹಾಂ ಹೌದು ಸ್ವಾಮಿ ಅಯ್ಯೋ ಬಿಡಿ ದಮ್ಮಯ್ಯ ಬಿಟ್ಟುಬಿಡಿ ನನ್ನ ಕೈಯಿಂದ ಆದುಲ್ಲೇ ಕೇಳ್ದಂಗಾತ್. ಸ್ವಲ್ಪ ಹೊತ್ ನಿಶಬ್ದ, ಮಧ್ಯೆ ಮದ್ಯೆ ಗಂಡಸರ ಸ್ವರ ಕೇಳ್ಸತಾ ಉಟ್ಟು ಯೋರೂ ಕೆಟ್ಟವು ಒಂದ್ ಹೆಣ್ಣ್ ಗೂಡೆನ ಹಾಳ್ ಮಾಡುತಾ ಒಳೊ ಸ್ವಾಮಿ ತಾ ಗೌಡ್ರು ಹೇಳ್ದೊ.

ಗೌಡ್ರೇ ನೀವು ಹಂಗೇ ಸ್ವಲ್ಪ ಮುಂದೆ ಬಂದ್ ನಿಂತ್ ಕಣಿ, ನಾನ್ ಹೋಗಿ ಅವರ್‍ನ ಸ್ವಲ್ಪ ವಿಚಾರ್‍ಸಿಕಂಡನೆತ್ತೇಳಿ ತನ್ನ ಜೋಬ್‌ಗಿಳಿದ್ದ ಹಣನೆಲ್ಲಾ ತೆಗ್ದ್ ಮುದ್ದೆ ಮಾಡಿ ಆ ಗೌಡ್ರ ಕೈಗೆ ಕೊಡ್ತ್. ಅಲ್ಲೆ ರಸ್ತೆ ಕರೆಂದ ನಾಲ್ಕೈದು ಒಳ್ಳ ಬೊಳಗಲ್ಲ್‌ಗಳ ಟಾರ್ಚ್ ಲೈಟ್‌ಂದ ಹುಡುಕಿ ಹೆರಿಕಿ ಕಂಡ್ ಜೋಬೊಳಗೆ ಸೇರ್‍ಸಿಕಂಡತ್. ಕೈಲೂ ನಾಲ್ಕು ಕಲ್ಲ್‌ಗಳ ಹಿಡ್‌ಕಂಡ್ ಬೇಗ ಬೇಗ ಕೊತ್ತಿನಂಗೆ ಆ ಸದ್ದ್ ಬಂದ ಜಾಗದ ಕಡೆಗೆ ಹೋಗಿ ಅಡಿಗಿತ್. ಅದೇ ಆಗಲೇ ದಾಟಿ ಹೋದ ಬೂದು ಬಣ್ಣದ ಕಾರು ರಸ್ತೆ ಸೈಡಿಗೆ ಅಲ್ಲೇ ನಿಂತಿತ್. ಅಲ್ಲೆ ಕೆಳಗೆ ಒಂದ್ ಸಣ್ಣಹಳ್ಳದ ಕೆಳಗೆ ಮೂರು ಜನ ಗಂಡಸರ ಆಕೃತಿ ಕಾಣ್ಸ್‌ತಾ ಉಟ್ಟು. ಈ ಒಂದ್ ಹೆಂಗ್ಸ್‌ನ ಹಿಡ್‌ಕಂಡ್ ಅವಳ ಕೆಳಗೆ ಬೀಳ್ಸಿಕಂಡ್ ಅವಳ ಕುತ್ತಿಗೆನ ಹಿಂಡ್‌ಕಂಡ್ ನೀನ್ ನನ್ನ ಮದ್ವೆ ಆಗೆನ ತೇಳಿಕಂಡ್ ಈಗ ನಂಗೆ ಮೋಸ ಮಾಡಿಟ್ಟು ಇವಳ ನಾನ್ ಸಾಯಿಸಿನೆ ತ್ತೇಳಿಕಂಡ್ ಪ್ರಯತ್ನ ಮಾಡುತಿದ್ದೊ. ಎರಡು ಜನ ಅವಳ ಕೈನ ಎಳ್ದ್ ಹಿಡ್ದ್‌ಕಂಡಿದ್ದೊ.

ಅವುಳು ಹೆದ್‌ರ್‌ಕಂಡ್, ಬಿದ್ದ್‌ಕಂಡ ಅವರ ಕೈಯಿಂದ ಬುಡ್ಸಿಕಂಬಕೆ ತನ್ನ ಶಕ್ತಿನ್ನೆಲ್ಲಾ ಕೊಟ್ಟು ಕಿರ್‌ಚಾಡಿಕಂಡ್ ಪ್ರಯತ್ನ ಮಾಡ್‌ತಿತ್.

ಒಂದ್ ಸಣ್ಣಗಿಡದ ಮರೆಗೆ ನೆಟ್ಟಂಗೆ ಆದಷ್ಟ್ ಹತ್ರ ಹೋದ ರಾಜು ಕೈಲಿದ್ದ ಒಂದ್ ಕಲ್ಲಿಂದ ಸ್ವಲ್ಪ ದೂರಲಿ ಕೈ ಹಿಡ್ದವಂಗೆ ಒಂದ್ ಪಾಸ್ಟ್ ಬೌಲ್ ಮಾಡ್ತ್. ಅದ್ ಅವನ ಹಣೆ ಮದ್ಯಕ್ಕೆ ಸರಿಯಾಗಿ ಟಪ್‌ತೇಳಿ ಸದ್ದ್ ಮಾಡ್ತ್. ಅಯ್ಯೋಯ್ಯೋಪ್ಪಾ ನನ್ನ ಹಣೆ ನನ್ನ ಹಣೆ ಒಡ್ದ್ ಹೋತ್‌ತಾ ಅಲ್ಲೆ ಒಂದ್ ರೌಂಡ್ ಹಣೆನ ಹಿಡ್‌ಕಂಡ್ ಸುತ್ತಿತ್. ಅವಂಗೆ ಎತ್ತ ಕಡೆಂದ ಈ ಕಲ್ಲ್ ಬೀತ್‌ತ ಗೊತ್ತಾತ್‌ಲೆ. ಅಷ್ಟೊತ್ತಿಗೆ ಇನ್ನೊಂದು ದೊಡ್ಡಕಲ್ಲ್ ಇನ್ನೊಂದು ಸೈಡ್‌ಲಿ ಗಾಬರಿಲಿ ನಿಂತ್ ನೋಡುತಿದ್ದವನ ಮೊಣಕಾಲ್ ಚಿಪ್ಪಿಗೆ ಬೀತ್. ಅಂವ ಅಯ್ಯೋಯ್ಯೋತ್ತೇಳಿಕಂಡ್ ಕಾಲ್‌ನ ಮೊಡ್ಸಿಹಿಡ್ಕಂಡ್ ಒಂದೇ ಕಾಲ್‌ಲಿ ಎರಡ್‌ರೌಂಡ್ ಹೊಡ್ದ್ ಯಾವಕಡೆಂದ ಈ ಕಲ್ಲ್‌ಗ ಬರುತಾ ಉಟ್ಟುತಾ ಸುತ್ತಾನೋಡ್ತ್ ಆಗ ಇನ್ನೊಂದು ಕಲ್ ಒಳ್ಳೆ ರಭಸಲಿ ಇಂವನ ಎದೆಗೆ ಡಬ್ಬತ ಬಂದ್ ಹೊಡ್ತ್. ಆ ಏಟಿಗೆ ಇಂವನ ಎದೆ ಒಡ್ದ್ ಹೋದಂಗೆ ಆಗಿ ಕೆಳಗೆ ಬಿದ್ದ್ ಗುಂಡು ತಗಲಿದ ಮೊಲದಂಗೆ ಒದ್ದಾಡ್‌ತಿತ್ತ್. ಓಹೊ ಕೆಲ್ಸ ಕೆಟ್ಟ್‌ಹೋತ್ ತಾ ಮದ್ಯಲಿ ಆ ಹೆಂಗ್ಸ್‌ನ ದೊಂಡೆನ ಹಿಡ್ದ್‌ಕಂಡಿದ್ದಂವ ಅವಳ ಕುತ್ತಿಗೆನ ಬುಟ್ಟು ಈ ಬಿದ್ದಿದ ಪ್ರೆಂಡ್ಸ್‌ನ ಕೈಹಿಡ್ದ್ ಎಳ್ಕಂಡ್ ನಿಂತಿದ ಕಾರ್‌ನ ಹತ್ರಕೆ ಓಡಿಕೆ ಶುರ್‌ಮಾಡ್ತ್. ಆಗ ಹಿಂದ್ ಗಡೆಂದ ಬಂದ ದಪ್ಪ ಒಂದ್ ಕಲ್ಲ್ ಆ ಎಳ್ಕಂಡ್ ಓಡ್ ತಿದ್ದವನ ಬೆನ್ನಿಗೆ ಸರಿಯಾಗಿ ಸದ್ದ್ ಕೇಳುವಂಗೆ ಪಚಕಂತ ತಗಲಿತ್. ಅದರೊಟ್ಟಿಗೆ ಇನ್ನೊಂದು ಕಲ್ಲ್ ರೊಂಯ್‌ತ ಹೋಗಿ ಅವನ ಅಗಾಲವಾದ ಕುಂಡಿ ಗಂಟ್ ಮದ್ಯಕೆ ಪಚಕ್‌ತ ಬಿದ್ದ್ ಮೇಲೆ ಹಾರ್ತ್. ಆಗ ಅಂವ ಕಷ್ಟಪಟ್ಟ್‌ಕಂಡ್ ಕಾರ್‌ನ ಹತ್ರ ತಲಪಿದಂವ ಮೊಣಕಾಲು ಊರಿ ಕೆಳಗೆ ವಾಲಿತ್ ಈ ಹಣೆಗೆ ಏಟ್ ಬಿದ್ದಂವ ರಕ್ತನ ಸೋರ್‌ಸಿಕಂಡ್ ಹೆಂಗೆಲ್ಲೂ ಪ್ರಯತ್ನಪಟ್ಟ್‌ಕಂಡ್ ಕಾರ್‌ನ ಬಾಗ್ಲ್‌ತೆಕ್ತ್. ಹಿಂದೆಂದ ಈ ಇಬ್ಬರ್‍ನ ಕಾರ್ ಒಳಗೆ ಕಷ್ಟ ಪಟ್ಟ್ ಹತ್ತಿಕಂಡೊ. ಇಂತಹ ಕತ್ಲೆಲಿ ಅದೂ ಯಾರೂ ಇಲ್ಲದ ಈ ಜಾಗಲಿ ಯಾರಿಗೆ ಇಷ್ಟೊಂದು ಧೈಯ ಬಾತ್ ನಮಿಗೆ ಕಲ್ಲು ಹೊಡೆಯಕೆತ ಒಂದ್ ಕೈಲಿ ಕಾರನ ಸ್ಟಾರ್ಟ್ ಮಾಡಿಕೆ ಹಣೆಗೆ ಪೆಟ್ಟ್ ಬಿದ್ದಂವ ನೋಡ್ತಿತ್. ಅಷ್ಟೊತಿಗೆ ಪಟಾರ್‌ತ ಸದ್ದ್ ಬಾತ್. ಕಾರ್‌ದ್ ಹಿಂಬಾಗದ ಗ್ಲಾಸ್ ಚೂರು ಚೂರಾಗಿ ಆ ಕತ್ಲೆ ಒಳಗೂ ಬೆಳ್ಳಂಗೆ ಮಿಂಚಿಕಂಡ್ ಹಾರ್ತ್. ಒಳಗಿದ್ದವು ಇಬ್ರೂ ಓ ನಡಿಯೋ ನಡಿಯೋತ ಜೋರಾಗಿ ಕಿರುಚಿ ಕಂಡೊ. ಕಾರು ಜೋರಾಗಿ ಸದ್ದ್ ಮಾಡಿಕಂಡ್ ಹೊರಟೇ ಬುಡ್ತ್.

ಇನ್ನೇನು ನನ್ನ ಉಸ್‌ರ್ ನಿಂತ್ ಹೋಗುವ ಆ ಕೊನೇ ಘಳಿಗೆಲಿ ಅಚಾನಕ್ ಆಗಿ ಆ ಮುರು ಜನ ರೌಡಿಗ ಯಾಕೆ ಹಿಂಗೆ ಕಿರುಚಾಡಿಕಂಡ್ ಓಡಿಹೋದ್ರೊ? ಈ ನಿರ್ಜನ ಜಾಗಲಿ ಯಾರ್ ಇಂಥಹ ಬಲ್ಯಾಡ್ಯ ಕೇಡಿಗ ಕಿರುಚಾಡಿಕಂಡ್ ಪ್ರಾಣ ಭಯಲಿ ಎದ್ದ್ ಬಿದ್ದ್ ಓಡಿ ಹೋಗುವಂಗೆ ಹೊಡ್ದ್ ಅಟ್ಟಿದ್? ತಾ ಆಶ್ಚರ್ಯಲಿ, ಖುಷಿಂದ ಬೆರಗಾಗಿ ಈ ಗೂಡೆ ಬಾಯಿ ಬುಟ್ಟಕಂಡೇ ಆ ಹಳ್ಳದ ಕೆಳಗೆ ನಿಂತಿತ್. ಆಗ ಒಂದ್ ಲೈಟ್ ಬೆಳಕ್

ಅಷ್ಟ್‌ದೂರಂದ ಬಂದ್ ಇವಳ ಮುಖದ ಮೇಲೆ ಬೀತ್. ಆಗ ಈ ಗೂಡೆ ತನ್ನ ಮೈಮೇಲೆ ಬಟ್ಟೆಇಲ್ಲದೇ ಬಟ್ಟೆ ಎಲ್ಲಾ ಹರ್ದ್ ಹೋದ್‌ದರಂದ ತನ್ನ ಕೈನೇ ಎದೆ ಮೇಲೆ ಅಡ್ಡ ಹಿಡ್ಕಂಡ್ ಆ ಗುರು ರಾಘವೇಂದ್ರ ಸ್ವಾಮಿನ ನೆನಕಂಡ್ ಗಾಭರಿಲಿ ನಡುಗಿ ಕಂಡ್ ನಿಂತಿತ್. ಆ ಲೈಟ್ ಬೆಳಕು ಕತ್ತಲೆನ ಸೀಳಿಕಂಡ್ ತನ್ನ ಹತ್ರಕ್ಕೆ ಬಂದು ತಲಪಿತ್. ಆಗ ಪಾಪ ಆ ಗೂಡೆ ನಿತ್ರಾಣಳಾಗಿ ಕೈ ಮುಗ್ದ್ ಇವನ ಪಾದ ಮೇಲೆ ದಪ್ಪನೆ ಬಿದ್ ಬುಡ್ತ್.

ಈ ಬಿದ್ದ್ ಹೋದ ಗೂಡೆನ ಅವಸ್ತೆ ನೋಡ್ದ ರಾಜುಗೆ ಬಹಳ ಬೇಜಾರ್ ಆಗಿ ಹೋತ್. ಶಿವನೇ ಎಂಥಾ ಕ್ರೂರ ಜನ ಒಳಪ್ಪಾ ಈ ಊರ್‌ಲೀ ಬಾಮ್ಮ ತಂಗಿ ನೀ ಹೆದರಿಕಂಬೋದು ಬೇಡತ್ತೇಳಿ ಹೋಗಿ ಅವಳ ಕೈ ಹಿಡ್ದ್ ಎಳ್ತ್. ಆದ್ರೆ ಅವಳಿಗೆ ತಲೆಲಿ ಪ್ರಜ್ಞೆ ಇದ್ದರೆ ತಾನೇ?ಇಷ್ಟು ಹೊತ್ತ್ ತನ್ನ ಪ್ರಾಣನ ಕಾಪಾಡಿಕೆ ಶಕ್ತಿ ಮೀರಿ ಒದ್ದಾಡಿತ್ತ್. ತನ್ನ ಮಾನ ಅಂತೂ ಈ ಮೂರು ಜನರಿಂದ ಹಾಳಾಗಿತ್. ಮಾನ ಹೋಗಿ ಪ್ರಾಣ ಉಳ್ದ್ ಕಂಡರಿಂದ ಈಗ ಮಾನ ಇಲ್ಲದ ಪ್ರಾಣನೂ ಬೇಕಾಗಿಲ್ವೇನೋ ಅವ್ವಂಗೆ ಈಗ ಅವಳ ದೇಹ ಸೊಯತಪ್ಪ ನಿಶ್ಚೇತವಾಗಿ ಬಿದ್ದು ಹೋಗುಟ್ಟು. ಈ ಧಫೆದಾರ ರಾಜು ಅವಳ ಬಾಳೆ ಗಿಡದಂತಹ ಶರೀರನ ಅಮಾನತ್ತಾಗಿ ಎತ್ತಿ ಹೆಗಲ ಮೇಲೆ ಹಾಕಂಡ್ ರಸ್ತೆಲಿ ನಿಂತಿದ್ದ ಗೌಡ್ರ ಹತ್ರಕ್ಕೆ ತಂದ್ ಮಲಗಿಸಿತ್. ಆಗ ಆ ಗೌಡ್ರು ತನ್ನ ಹೊದ್ದ್ ಕಂಡಿದ್ದ ಶಾಲುನ ಅವಳ ಬೆತ್ತಲೆ ಮೈಗೆ ಹೊದಿಸಿದ್ರೂ. ಸ್ವಲ್ಪ ಆ ಗೂಡೆಗೆ ಪ್ರಜ್ಞೆ ಬಂದ್ ಎಚ್ಚರ ಆತ್. ಆಗ ಈ ಹೆಣ್ಣ್ ಗೂಡೆ ಇಬ್ರೂಗೂ ಕೈ ಮುಗ್ದ್ ಜೋರಾಗಿ ಮರುಡಿಕೆ ಶುರು ಮಾಡ್ತ್. ಆಗ ಆ ಗೌಡ್ರು ಹೆದ್‌ರ್ ಬೇಡಾ ಮಗಾ ನಾವಿದ್ದೀವಿ. ನೋಡು ಈ ಅಪ್ಪಾವರೇ ಆ ಮೂರು ಜನ ಕೇಡಿಗಳನ್ನ ಹೆಂಗೆ ಹೊಡ್ದ್ ಓಡಿಸಿಬುಟ್ರ್ಯೋ? ತ ಹೇಳ್ತ್.

ಇನ್ನೇನ್ ನಿಂಗೆ ಭಯಬೇಡ ಮಾತಡಮ್ಮ ನಿನ್ನ ಹೆಸ್ರೇನಮ್ಮಾ? ಯಾವ ಊರವಳು? ಆಮೂರು ಜನರು ಯಾರು? ನಿಂಗೆ ಯಾಕೆ ಈ ಥರ ಕಷ್ಟ ಕೊಟ್ರು ಹೇಳುಮಗಾ ನಿಂಗೆ ನಾವು ಸಹಾಯ ಮಾಡಿವೆತ್ತೇಳಿ ಅವಳ ತಲೆಸವರಿ ಧೈರ್ಯ ತುಂಬಿತ್. ಆಗ ರಾಜು ಹೇಳ್ತ್ ಗೌಡ್ರೇ ಈಗ ಅವಳು ತುಂಬಾ ಗಾಭರಿಲಿ ಉಟ್ಟು ಆಮೂರು ಜನ ಅವಳ ಮಾನ ಕೆಡ್ಸಿದ್ದ್ರೊ. ಇನ್ನ್ ಬಾಕಿ ಇದ್ದದ್ ಅವಳ ಪ್ರಾಣ. ಆದ್ರೇ ಇವಳ ಅದೃಷ್ಟ ಚೆನ್ನಾಗಿತ್ ಇವಳ ಕೂಗಾಟ ನನ್ನ ಕಿವಿಗೆ ಬೀತ್. ನಾನ್ ಇವಳ ಪ್ರಾಣನ ಉಳ್ಸಿದೆ ಆದ್‌ದರಂದ ಇವಳ ವಿಚಾರಣೆ ಮಾಡಿ ಇವಳ ಮನ್ಸ್‌ನ ಇನ್ನೂ ಘಾಸಿ ಮಾಡ್ದು ಬೇಡ. ಆತಾ? ಈ ಗಿಣಿಮರಿನ ನಿಮ್ಮ ಜವಾಬ್ದಾರಿಗೆ ಒಪ್ಪಿಸಿನೆ. ಆ ರಣಹದ್ದ್‌ಗಳ ಕೈಯಿಂದ ಬುಡ್ಸಿಕಂಡ್ ಬಂದ್‌ದರಂದ ಇವಳ ಮುಂದಿನ ವ್ಯವಸ್ತೆನ ನೀವೇ ಸರಿ ಈ ರಾತ್ರಿ ಇವುಳು ನಿಮ್ಮಲ್ಲಿ ಉಳ್ಕ್ಕಳ್ಳಲಿ. ಹಾಂ. ಹಂಗೇ ಇವಳನ್ನು ಇವಳ ಮನೆಗೆ ತಲಪಿಸಬೇಕು. ಅದ್‌ದರಿಂದ ನೀವೂ ಇನ್ನೂ 200ರೂಪಾಯಿ ಹೆಚ್ಚಿಗೆ ಮಡಗಿಕಣಿ ಆತ್ತಾ ಕೊಡಿ ಇಲ್ಲಿ ನನ್ನ ಹಣನತ್ತೇಳಿ ಆ ರಸ್ತೆಲಿ ಸಂಪಾದನೆ ಮಾಡ್ದ ಹಣನ ಇಸ್‌ಕಂಡತ್. ಆಮೇಲೆ ಆ ಕಟ್ಟ್‌ಂದ ಬಿಚ್ಚಿ ಐನೂರು ರೂಪಾಯಿನ ಲೆಕ್ಕ ಹಾಕಿಕೊಟ್ಟತ್. ಅಮ್ಮಾ ನೀನ್ ಕೂಡಾ ನನ್ನೊಬ್ಬ ತಂಗಿ, ಈ ಗೌಡ್ರ ಜೊತೆಲಿ ಧೈರ್ಯ ಆಗಿ ಹೋಗು ಅವ್ರು ನಿನ್ನ ಜೋಪಾನ ಆಗಿ ನೋಡಿಕಂಡವೆತ್ತೇಳಿ ಅವಳ ತಲೆ ಸವರಿ ಬೆನ್ನ್ ತಟ್ಟಿ ಧೈರ್ಯ ತುಂಬಿತ್.

ಹಾಂ. ಗೌಡ್ರೇ ನಂಗೆ ತುಂಬಾ ಹೊತ್ ಆಗಿ ಹೋತ್. ನಾನ್ ಇನ್ನ್ ಹೊರಟನೆತ್ತೇಳಿ ಬರ್ಲಾಗೌಡ್ರೇತಾ ಅವುಕೆ ನಮಸ್ಕಾರ ಹೇಳಿ ಅಲ್ಲಿಂದ ಹೊರಟೇ ಬುಟ್ಟತ್, ಈ ಗೂಡೆಗೂ, ಮತ್ತೆ ಈ ಗೌಡ್ರಿಗೂ ಇಷ್ಟೆಲ್ಲಾ ನಡ್ದದ್ ಒಂದ್ ಪಿಚ್ಚರ್‌ಲಿ ಕುದ್ದ್ ಕಂಡ್ ನೋಡ್ದ ಹಂಗೆ ಒಂದ್ ಘಳಿಗೆಲಿ ನಡ್ದ್ ಹೋದುದರ ನಂಬಿಕೇ ಆಗದಂಗೆ ಆಗಿ ಹೋಗಿತ್ತ್. ಈ ಮನುಷ್ಯಂದ್ ಎಂಥಾ ಒಂದ್ ಸಮಯ ಪ್ರಜ್ಞೆ. ಎಂಥಹ ಎದೆಗಾರಿಕೆ ಅಬ್ಬಬ್ಬಾ!!! ಎಂಥಹ ಚುರುಕುತನ. ಅರ್ರೇ!! ಇಷ್ಟು ಹೊತ್ತು ಇಲ್ಲಿ ನೋಡ್ದ್‌ರೆ ರಸ್ತೆಲಿ ಹೋಗೋ ಬರೋ ಲಾರಿಗಳ ಅಡ್ಡಹಾಕಿ, ಅವುಕೆಲ್ಲಾ ಬೆದರಿಕೆ ಹಾಕಿ ಆ ಕದೀಮ ಕಾಳಸಂತೆ ಕೋರರ ಸುಲಿಗೆ ಮಾಡ್‌ತಿದ್ದಂವ ಒಂದು ಗಂಟೆಲಿ ಬೇಕಾದಷ್ಟ್ ಹಣನ ಸಂಪಾದನೆ ಮಾಡಿದಂವ ಇನ್ನೊಂದು ಕ್ಷಣಲಿ ಒಂದ್ ಹೆಣ್ಣ್ ಕೂಸ್‌ನ ಪ್ರಾಣನ ಉಳ್ಸಿಕೆ ಜೀವದ ಹಂಗ್ ತೊರ್ದ್ ಹೋರಾಡಿ ಬುಡ್ತ್ ಅಂತಹಾ ರೌಡಿಗಳ ಕಾಲು ಕೈ ಮುರ್ದ್ ದನಕ್ಕೆ ಬಡ್ದಂಗೆ ಅವರ ಅಟ್ಟಾಡಿಸಿಕಂಡ್ ಹೊಡ್ದ್ ಓಡ್ಸಿತ್.

ಇಂವ ನಿಜವಾಗ್ಲೂ ಸಾಮಾನ್ಯ ಆದ ಒಬ್ಬ ಮನ್ಸ ಅಲ್ಲ. ಇಂವ ಒಬ್ಬ ಮನ್ಸ್‌ನ ರೂಪ ಸಾಕ್ಷಾತ್ ದೇವ್ರು, ಇದೆಲ್ಲಾ ಆ ದೇವರ ಮಹಿಮೆ ಕಣವ್ವಾ ನೋಡು ನಿನ್ನ ಪ್ರಾಣನ ಕಾಪಾಡಿಕೆ ಇಂವ ದೇವರಂಗೆ ಬಂದ್ ಪ್ರತ್ಯಕ್ಷ ಆತ್ ಹಂಗೇ ದೇವರ ತರನೇ ಮಾಯ ಆಗಿ ನಿನ್ನಿಂದ ಯಾವ ಫಲಾಪೇಕ್ಷೆನ ಇಟ್ಕ್‌ಕಣದೇ ನಿನ್ನ ಮನ್ಸ್‌ನ ಅರ್ಥಮಾಡಿಕಂಡ ಅಂವ ನಿನ್ನ ಜೋಪಾನ ಆಗಿ ನಿನ್ನ ಮನೆಗೆ ತಲಪಿಸುವ ಜವಾಬ್ದಾರಿನ ಕೂಡಾ ನಂಗೆ ಒಪ್ಪಿಸಿ ಹೋಗುಟ್ಟು, ಮಗಾ ಅವನೇ ದೇವ್ರು ಕಣವ್ವಾ, ಇಂತಹ ಕರುಣೆ, ಇಂತಹ ವಿವೇಕ ಸಾಧಾರಣ ಮನ್ಸ್‌ರಿಗೆ ಬಾದುಲೆ ಮಗಳೇ. ನಡೀ ಮಗಳೇ ನನ್ನ ಮನೆಗೆ ಪೋಯಿತ್ತೇಳಿ ಆ ಗೌಡ್ರು ತನ್ನ ಬುಲ್ಲೆಟ್ ಗಾಡಿನ ಸ್ಟಾರ್ಟ್ ಮಾಡಿ ಈ ನಿರಾಶ್ರಿತ ಗೂಡೆನ ಕರ್ಕಂಡ್ ಮನೆ ಕಡೆಗೆ ಹೊರಟಿತ್

ದಫೇದಾರ ರಾಜು ಪೇಪರ್ ಮಿಲ್ ಸರ್ಕಲ್‌ಗೆ ಬಂದ್ ತಲಪ್‌ಕನ ಅಲ್ಲಿಗೆ ಕೆ.ಆರ್. ಎಸ್ ಕಡೇಂದ ಕೊನೇ ಗೌರ್ನಮೆಂಟ್ ಬಸ್ ಬಂದ್ ನಿಂತಿತ್. ಅದರಲ್ಲಿ ಹತ್ತಿ ಕುದ್ದ್‌ಕಂಡ್ ರಾಜು ಮೈಸೂರು ಸಿಟಿಗೇ ಬಂದ್ ತಲ್ಪಿತ್,

(ಮುಂದ್‌ವರ್ದದೆ) ಶಂಕರನ ಬಸಪ್ಪ

---

## ಒಂದೆರಡು

ಕೇವಲ ಒಂದೆರಡು
ಕೂದಲು ಉದುರುವುದೆಂದು
ಟಿ. ವಿ. ಜಾಹಿರಾತುನೋಡಿ
ನಾನು ಬಳಸಿದೆ ಶ್ಯಾಂಪನ್ನು
ಆದರೆ ಈಗ ಉಳಿದಿದೆ
ಒಂದೆರಡು ಕೂದಲು ಮಾತ್ರ.

ಬಾಳೆಕಜೇ ತೀರ್ಥಪ್ರಸಾದ್, ಸಂಪಾಜೆ

---

ದಾರಿಲಿ ಇದ್ದ ಕಲ್ಲ್‌ನ ಎಳ್ದ್ ಎದೆ ಮೇಲೆ ಹಾಕಂಡತ್‌ಗಡ

# ಕಳ್ಳ್ ಕುಡಿಯುವ 'ಆಸೆಗಾಗಿ' ಹಂದಿ ವೇಷ ಹಾಕಿತ್

ಕಳ್ಳ್ ಮತ್ತೆ ಮಾಸ ಸಿಕ್ಕಿರೆ ಜನ ಏನು ಬೇಕಾದ್ರೂ ಮಾಡಿಕೆ ಹೇಸಿದ ವಲ್ಲಾ. ಒಬ್ಬನ ಕೆಲಸ ನ್ಯಾಯವಾಗಿ ಆಕಾದುರೆ ಅದ್ ಅನ್ಯಾಯ ಇದ್ದವನ ಕಡೆ ವಾಲ್‌ದೆ. ಪ್ರತಿಯೊಂದು ಕಾನೂನು. ಪಂಚಾಯಿತಿ ಅಫೀಸ್‌ಗಳಲಿ ಸಹ ಈ ಕಳ್ಳ್‌ನ ಕಡೆ ತೀರ್ಮಾನ ಆದೆ. ಇನ್ನು ಎಂತವೆಲ್ಲಾ ಘಟನೆ ಸಹ ನಡ್‌ದ್ ಹೋದೆ ಈ ಕಲಿಯುಗಲಿ.

ಆದರೆ ಇಲ್ಲಿ ಅಂಬೋಲಿ ಹೆಸ್‌ರ್‌ನಂವ ಇಂತದ್ ಮಾಡ್‌ತ್‌ಲೆ. ತನ್ನ ಹೊಟ್ಟೆ ತುಂಬಿಸಿಕಣಕೆ ನೋಡ್‌ತ್. ಬೇರೆಯವರ ಹೊಟ್ಟೆ ಓಡ್‌ತ್‌ಲೆ ಪಾಪ.

ಅಂಬೋಲಿ ಮತ್ತೆ ಸಾಂಬ ಹೆಸರ್‌ನ ಇಬ್ಬರು ಮಿಲ್ಟ್ರಿ ಕ್ಯಾಂಪ್‌ಲೀ ಹಂದಿ ನೋಡಿ ಕಂಬ ಕೆಲಸದಲ್ಲಿದ್ದೊ ಸಾಂಬ ಅಂಬೋಲಿ ಹೇಳ್‌ದಂಗೆ ಕೇಳ್‌ತಿತ್ತ್. ಸಾಂಬ ತುಂಬಾ ಕಳ್ಳ್ ಕುಡಿತಿತ್. ಅಂಬೋಲಿಗೆ ಮಾಸ ಸಿಕ್ಕಿರೆ ಮನೆ ಕಡೆ ಹೆಣ್ಣ್ ಮಕ್ಕಳ ಗ್ಯಾನ ಇರ್‌ದುಲೆ. ಅಂವ ಸಿಕ್ಕುವ ವರ್ಷಕೊಂದು ರಜೆಲೀ ಸಹ ಮನೆಗೆ ಹೋತಿತ್‌ಲೆ. ಅಂವನ ಹಂದಿ ಪಾರದ ಕೆಲಸ ಬೇರೆ ಯವ್‌ಕೆ ಕೊಟ್ಟು ಬುಟ್ಟವೆತ ಇಂವ ಎಲ್ಲಿ ಯಾರ ಮದುವೆ ಸಮಾರಂಭಗಳಲಿ ಊರ್‌ಲಿ ಇರ್‌ಕನ ಅಲ್ಲಿ ಹೋದಲ್ಲಿ ಬೇಕಾದಷ್ಟು ಮಾಸ ತಿಂದ್ ಯಾರಾದರ್ ನೋಡಿ ಬುಟ್ಟವೆತ ಮಾಸ ಗೈಪ್‌ನ ಜೋಬೊಳಗೆ ತುಂಬಿಸಿಕಂಡ್ ಬಂದದ್ ಉಟ್ಟು. ಇವು ಹಂದಿ ಸಾಕುವಲ್ಲಿ ಇಪ್ಪತ್ತೈದು ಹಂದಿಗ ಇದ್ದೊ. ಎಲ್ಲಾ ಬಿಳಿ ಹಂದಿಗ. ಇವ್ರುಕೆ ಈ ಕೆಲಸ ಭಾರಿ ಆರಾಮ ಇತ್. ತಿಂಬದು ಬಿದ್ದ್ ಕಂಬದು ಎರಡೇ ಕೆಲ್ಸ ಉಳಿಕೆ ಅನ್ನ ರೊಟ್ಟಿನ ತಂದ್ ಹಾಕ್ತ್ತಿದ್ದೊ. ಸ್ವಲ್ಪ ಹಂದಿಗಳ್ನ ಬುಡುತ್ತಿದ್ದೊ. ಅವು ತಿರ್‌ಗಾಡಿಕಂಡ್ ಗೂಡಿಗೆ ಬಾತಿದ್ದೊ. ಹಿಂಗಿರ್‌ಕನ ಒಂದ್ ದಿನ ಅಂಬೋಲಿ ಸಾಂಬಗೆ ಹೇಳ್ತ್. ಎಷ್ಟ್ ದಿನ ನಾವ್ ಹಂದಿಗಳ ಹಿಂಡ್‌ಲೀ ಹೊಟ್ಟೆ ತುಂಬ್‌ಸುದು, ಒಂದ್ ಹಂದಿನ ಹೊಟ್ಟೆ ಒಡಿಯೊನತ, ಇದಿಕೆ ಸಾಂಬ ಒಪ್ಪಿತ್. ನಮ್ಮ ಕೆಲ್ಸ ತೀರದ ಮ್ಯಾಲೆ ನಮ್ಮ ಸಾಬ್‌ಗೆ ಹೇಳನೋ ಹಂದಿ ಕಾಂಬಲೇತ. ಇವ್ ಮಾಸತಿಂಬಕೆ ಆಸೆ ಆಗಿ ಒಂದ್ ದಿನ ಒಂದ್ ಹಂದಿನ ಹೊಟ್ಟೆಗೆ ಚಾಕ್ ಹಾಕಿದೋ. ಬೇಕಾದಷ್ಟ್ ತಿಂದ್ ಗೌಜಿ ಮಾಡಿ ಸ್ವಲ್ಪ ಮಾಸನ ಒಣಗಿಸಿ ಇಟ್ಟೊ. ಸ್ವಲ್ಪ ಮಾರ್‌ದೊ. ಇವು ಇರ್ ವಲ್ಲಿಂದ ಇವರ ಕ್ಯಾಂಪ್ ಎರಡ್ ಕಿ.ಮೀ. ದೂರ ಇದ್ದರಿಂದ ಯಾರಿಗೂ ಗೊತ್ತಾತ್‌ಲ್ಲೆ. ಮಾರನೇ ದಿನನೇ ಇವರ್ರ ಸಾಬ್ ಹೇಳಿ ಕಳಿಸಿತ್ತ್. ನಾನ್ ಹಂದಿಗಳ್ನ ಚೆಕ್ ಮಾಡಿಕೆಬನ್ನೆತ. ಇವ್ ಹಂದಿ ಕಾಂಬಲೇತ ಸಾಬ್‌ಗೆ ತಿಳಿಸಿ ಇತ್‌ಲ್ಲೆ. ಅಂಬೋಲಿ ಸಾಂಬಗೆ ಜ್ವರ ಬಂದಂಗೆ ಆತ್. ಕೆಲ್ಸ ಹೋಗ್ ಬುಟ್ಟದೆ ಅಲ್ಲಾತ ಅಂಬೋಲಿ ಸಾಂಬಗೆ ಹೇಳ್‌ತ್ ನಾನ್ ನಿಂಗೆ ಒಂದ್ ಕುಪ್ಪಿ ಮಿಲ್ಟ್ರಿ ರಮ್ ಕೊಟ್ಟನೆ. ನೀನ್ ಬರೀ ಹತ್ತ್ ನಿಮಿಷಕ್ಕಾಗಿ ಹಂದಿ ವೇಷ ಹಾಕಿಬುಡು. ಬಾಕಿ ನಾನ್ ನೋಡಿಕನೆತ ಕಳ್ಳ್‌ನ ವಿಷಯ ಕೇಳ್ಕಕನ ಸಾಂಬನ ಬಾಯಿಲಿ ನೀರ್ ಬಾತ್. ಕಳ್ಳ್ ಸಿಕ್ಕಿರೆ ಅಂವ ಎಂತ ಮಾಡಿಕು ರೆಡಿಯೇ. ನೋಡಿಕೆ ಬ್ಯಾರೆ ಅಂವ ಬೆಳ್ಳನೆ ಆಗಿ ತಡಿ ಹಂದಿಗಳಂಗೆ ಇತ್ತ್. ಅಂವನ ತೊಡೆಲೀ ಒಂದು ರೋಮ ಸಹ ಇತ್‌ಲೇ. ಬಾಸ್ ಬಾಕೆ ಕಾಲ್ ಘಂಟೆ ಉಟ್ಟುತ ಇರ್‌ಕನ ಅಂಬೋಲಿ ಹಂದಿಗಳ್ನ ಗುಡ್ಡೆ ಸೇರಿಸಿತ್ತ್. ಸಾಂಬ ಬರೀ ಬ್ಯತ್ತಲೆ ಆಗಿ ಹಂದಿಗಳ ಮಧ್ಯೆಲೀ ದೇವ್‌ರಿಗೆ ಅಡ್ಡ ಬಿಳುವಂಗೆ ಬೀತ್. ಸ್ವಲ್ಪ ಮೊಣ್ ಕಾಲ್ ಊರಿಕಂಡ್ ಬೆನ್ನ್‌ನ ಸೊಂಟದ ಕೆಳ್‌ಗೆ ಇರುವ ಎರಡ್ ಅಂಡ್‌ನ ಸ್ವಲ್ಪ ಮ್ಯಾಲೆ ಎತ್ತಿತ್. ದೂರಲಿ ನೋಡ್‌ದವ್‌ಕೆ ಸಾಂಬ ಹಂದಿಗಳಂಗೆ ಕಾಂಬತೀತ್. ಸಾಬ್ ದೂರಲಿ ಬಾಕನ ಅಂಬೋಲಿನ ಎದೆ ಢವ,ಢವ ಹೇಳಿಕೆ ಸುರ್ ಆತ್. ಸಾಂಬ ಹಂದಿಗಳಂಗೆ ಪೋದಿಷನ್‌ಲಿ ಇತ್ತ್. ಮುಂದೆ ಒಂದು ಕ್ವಾಟರ್ ಏರಿಸಿತ್ ಸಾಂಬ. ಹತ್ತಿರ ಬಾಕೆ ಮುಂದೆ ಅಂಬೋಲಿ ಕೈಯಿಲಿ ಮೂಗ್‌ನ ಹಿಡ್‌ಕಂಡ್ ಸಾಬ್‌ನ ಹತ್ರ ಓಡ್‌ತ್ತ್. ಸಾಬ್, ಸಾಬ್ (ನರಖುದಿರ್ ಮತ್ ಜಾವೋ ಸೂವರ್‌ಕ ಟಟ್ಟಿಕಾ ಬದ್‌ಬು ಆ ರಹಾ ಹೈ) (ಇದರ್ ಸೇ ಗಿಂತೀ ಕರಾವುಂಗಾ) ಸಾಬ್ ಸಾಬ್ ಹತ್ರ ಮಾತ್ರ ಹೋಗ್ಬೇಡೀ ಹಂದಿಗಳ ಹೆಲ್ ವಾಸನೆ ಬಂದದೆ ಇಲ್ಲಿಂದಲೇ ಲೆಕ್ಕ ಮಾಡ್‌ನೇ) ಇಂವ ಹೇಳಿ ಆದಂಗೆ ಸಾಬ್ ಸಹ ಮೂಗು ಬಿಗಿಯಾಗಿ ಹಿಡ್‌ಕಂಡತ್. ಅಂವ ಪಾಪ ಬ್ಯಾರೆ ಹಂದಿ ಮಾಸ ತಿಂಬತ್ತಿತ್ತ್‌ಲೇ. ಅಂಬೋಲಿ ಕೈ ಬೆರಳ ತೋರಿಸಿ ಲೆಕ್ಕ ಮಾಡ್‌ತ್ (ಏಕ್, ದೋ, ತೀನ್ ಪಚ್ಚೀಸ್‌ತೇಳಿ)ಒಂದು, ಎರಡು, ಮೂರು, ಇಪ್ಪತ್ತೈದ್ ತೇಳಿ ಮಧ್ಯೆ ಇರುವ ಸಾಂಬ ಹಂದಿನ ನೋಡಿ ಬಾಸ್ ಹೇಳ್‌ತ್ ಇದೇ ಎಲ್ಲಕ್ಕಿಂತ ದೊಡ್ಡ ಹಂದಿ ತೇಳಿ ಅಂಬೋಲಿ ಹೇಳ್‌ತ್. ಅದ್ ಮರಿ ತುಂಬಿದ ಹಂದಿತೇಳಿ ಸಾಬ್ ಸಾಂಬನ ಕೇಳ್‌ತ್. ಸಾಂಬ ಎಲ್ಲಿ ಅಂವ ಕಾಂಬದುಲೇತ ಕೇಳ್ತ್ ಅಂಬೋಲಿ ಹೇಳ್‌ತ್ತ. ಅಂವ ಉರುಚಟ ಹತ್ತಿ ಆಸ್ಪತ್ರೆಗೆ ಹೋಗುಟ್ಟುತ ಸುಳ್ಳ್ ಹೇಳ್‌ತ್. ಸಾಬ್ ಅವಂಗೆ ಶಹಬಾಷ್ ಹೇಳಿ ಹೋತ್. ಸಾಬ್ ಹೋದಂಗೆ ಅಂಬೋಲಿ ಸಾಂಬನ ಏಳ್‌ಸೀ ಇಡೀ ಒಂದ್ ಲೈಪ್ ಬಾಯಿ ಸಾಬುನ್ ಕೊಟ್ಟ್ ಮಿಯಕೆ ಹೇಳ್‌ತ್. ಇದ್ ಕಳ್‌ದ್ ಎರಡ್ ದಿನ ಆದ ಮ್ಯಾಲೆ ಅಂಬೋಲಿ ಸಾಂಬ ಇಬ್ಬರು ಹೋಗಿ ಸಾಬ್‌ಗೆ ಹೇಳ್‌ದೋ ಸಾಬ್ ಮರಿತುಂಬಿದ ಹಂದಿ ಕಾಂಬಲೇ. ಎಲ್ಲೊ ಕಾಡ್‌ಲಿ ಮರಿ ಹಾಕಿಟ್ಟು. ನಾವ್ ಇಡೀ ದಿನ ಹುಡ್‌ಕಿದು ಸಿಕ್ಕಿತ್‌ಲೇ ಎಲ್ಲೊ ಕಾಡ್ ಹತ್ತಿ ಬುಟ್‌ತ್ ಕಂಡದೆತ ಸಾಬ್ ಹೇಳ್‌ತ್. ಪರವಾಗಿಲ್ಲೆ ಬುಡಿ ಒಂದ್ ಹಂದಿ ಹೋದರೆನ್ ನೀವ್ ಎರಡ್ ವರ್ಷಂದ ಮರಿಗಳ್ನ ಸಾಕಿ ದೊಡ್ಡದ್ ಮಾಡ್‌ದ್ರಿ. ಅದಿಕೆ ಖುಷಿ ಪಡಕು. ನಾನ್ ಬರುವ ವಾರ ವರ್ಗಾ ಆಗಿ ಬ್ಯಾರೆ ಕಡೆ ಹೋನೆ ನೀವ್ ಅದಿಕೆ ಬ್ಯಾಜಾರ ಮಾಡ್ಬೆಡೀತ ಹೇಳ್‌ತ್. ಹೊಸ ಸಾಬ್‌ಗೆ ನಿಮ್ಮ ಬಗ್ಗೆ ಹೇಳ್‌ನೆ ನೀವಿಬ್ಬರು ಭಾರಿ ಒಳ್ಳವ್ರು. ಇವೆ ಈ ಕೆಲ್ಸಕ್ಕೆ ಇರ್‌ಲಿತ ಹೆಳ್‌ತ್. ಮತ್ತೆ ಅಫೀಸರ್‌ಗೆ ಹೇಳ್ನೆ ನಿಮ್ಗೆ ಇನಾಮು ಕೊಡಿಕೆ ಆಗಸ್ಟ್ ಹದಿನೈದನೆ ತಾರೀಖಿಗೆ. ಅಂಬೋಲಿ ಸಾಂಬಗೆ ಮನ್‌ಸ್ಸೊಳಗೆ ತುಂಬಾ ಖುಷಿ ಆತ್. ಇನಾಮು ಸಿಕ್ಕದಿದ್ರು ಚಿಂತೆ ಇಲ್ಲೆ ಈ ಹಂದಿ ನೋಡಿ ಕೊಂಬ ಕೆಲ್ಸ ಹೋಕಾಗದ್ ಮತ್ತೆ ಹೊಸ ಸಾಬ್ ಬಂದ್ ಹದಿನೈದ್ ದಿನ ಕಳ್‌ದ ಮ್ಯಾಲೆ ಇದೇ ತರ ಇನ್ನೊಂದು ಪ್ರೋಗ್ರಾಂ ಮಾಡಿ ಕೈಲ್ ಮೂರ್ತ ಮಾಡ್‌ನೋತ, ನೋಡಿ ಅಂಬೋಲಿ ಸಾಂಬರ ಕಥೆ.

— ತೆಕ್ಕಡೆ. ಬಿ. ರಘುನಾಥ, ಮುತ್ತಾರ್ ಮುಡಿ.

---

**ನೊಣ ತಿಂದು ಕುಲ ಕೆಡಿಸಿ ಕಂಬದು ಯಾಕೆ**

## ಏ ಹೈದಾ ! ನೀ ಕ್ರೊದ!!

ಕೊಡ್‌ಗ್‌ಲಿ ಒಬ್ಬ ಬಹಳ ಉಪಕಾರ ಮಾಡ್ವ ಮನ್‌ಸ ಇತ್ತ್. ಬೋಜಪ್ಪ, ಬೋಜಪ್ಪಂತೇಳಿ ನಮ್ಮ ನೆಂಟ್ರ ಮನೆಗೆ ಬಾತ್. ಇಂವ ಬಾರೀ ರಸದ ಹೈದ. ಊರಿನವುಕೆಲ್ಲಾ ಬಾರೀ ಖುಸಿ, ಒಂದ್ ವಾರ ಮುಂದೆ ಬಂದರೆ ಏನಾದ್ರೂ ಹೋಕಿಲ್ಲೆ. ಊರಿಗೆ ಉಪಕಾರಿ ಮನೆಗೆ ಮಾರಿ ತೇಳ್‌ದಂಗೆ ಎಲ್ಲಾ ಕೆಲ್ಸನು ಹಂಗೆ ಮಾಡ್ದು. ಊರಿಗೆ ಚಪ್ಪರ ಹಾಕಿಕೆ ಬೇಗನೆ ಹೋದರೆ, ಮತ್ತೆ ಮನೇಲಿ ಮೂರು ಲೋಕ ತಿರ್‌ಗಿರ್‌ರೂ ಮನೆ ಕಡೆ ಕಾಲು ಹಾಕುಲೆ.

ಒಂದ್ ದಿನ ಮಡಿಕೇರಿ ಬಸ್-ಸ್ಟ್ಯಾಂಡ್‌ಲಿ ಎರ್ಡ್ ಜನಮಾತಾಡ್‌ತ್ತಾ ಇದ್ದೋ. ಅಂವ ಅಲ್ಲಿ ಮೆಲ್ಲೆ ಕಿವಿಕೊಟ್ಟತ್ತ್. ಮತ್ತೆ ಮೆಲ್ಲೆ ಮಾತು ಆಲ್ಸುಗಡ. ಇಂವ ನನ್ನ ಪಿಜ್ಜನ ಕಡೆನ ಸಂಬಂಧ ಆಗಿರೋಕುಂತೇಳಿ. ಅವ್‌ರಲಿ ಚಂಗಯ್ ಹಾಕಿಕೆ ಸುರು ಮಾಡ್ತ್. ಕಾಫಿ ಗೀಫಿ ಎಲ್ಲಾ ಕುಡ್ಸು, ಮೆಲ್ಲೆ ಅವರೊಟ್ಟಿಗೆ ಹೊರ್‌ಟತ್ತ್.

ಈ ಹೈದ ಹಂಜ್ಜ, ಇಂಗ್ಲೀಷ್ ಮಾತಾಡ್ದೆ. ಅವಂಗೆ ಸ್ವಲ್ಪ ದಿನಂದ ಮೊದಲು ನೋಸ್ ಪ್ರಾಬ್ಲಮ್(Nose problem)ಇತ್ತ್ ಕಂಡದೆ. ಅಂವ ಅವ್ನ ನೆಂಟ ಅಣ್ಣನಲಿ Phone ಮಾಡಿ ಹೇಳ್ತ್. ನಂಗೆ ನೋಸ್ ಪ್ರಾಬ್ಲಮ್ ನಿನ್ನ ತನು, ಮನ, ಧನಂದ ಸಹಾಯ ಮಾಡೊಕು" ಆಗ ಅಂವ್ನ ಅಣ್ಣ ಹೇಳ್ತ್. ನಿಂಗೆ ನಿಜನೂ ನೋಸ್ ಪ್ರಾಬ್ಲಮ್ ಅಲ್ಲಂತಹೇಳಿ ಮೆಂಟಲ್ ಹಾಸ್ಪಿಟಲ್‌ಗೆ ಎಡ್‌ಮಿಟ್ ಮಾಡ್ತ್.

ಹಾಸ್ಪಿಟಲ್‌ಲಿ ಡಾಕ್ಟ್ರರಿಗೆ ಇಂಗ್ಲೀಷ್ ಬಿಟ್ರೆ ಮತ್ತೆ ಒಂದೂ ಭಾಷೆನೂ ಬಾದ್ನೆ. ಹೈದಂಗೆ ಎಷ್ಟೂ ಹೇಳ್ರೆ ಅರ್ಥ ಆದುಲೆ. ಅಂವ್ನ ನೋಡಿಕೆ ಬಂದೋರೊಟ್ಟಿಗೆ, ಇಂವ ಅಂಗಿ ಗಂಟ್ ಮೂಟೆ ಕಟ್ಟಿ ಸೀದಾ ಎದ್ದ್‌ಬಾದು. ನರ್‌ಸ್‌ಗ ಪುನಃ ಅವ್ನ ಕೈನ ಎಳ್ದ್ ಬೆಡ್‌ಲಿ ಮಲ್ಗಿಸುದ್. ಹಿಂಗೆ ಹೈದ ಮೂರ್‍ನಾಕು ಸಲ ಮಾಡ್ತ್. ಇದನ್ನ್ ಕಂಡ್ ಡಾಕ್ಟರ್ ಬೇಜಾರಾಗಿ ಹಿಂಗೆ ಹೇಳ್ತ್. ವೇರ್ ಆರ್ ಯು ಗೋಯಿಂಗ್ ತ(ನೀ ಎಲ್ಲಿಗೆ ಹೋದು) ಇಂಗ್ಲೀಷ್‌ಲಿ ಹೇಳ್ತ್. ಹೈದಂಗೆ ಎಂತ ಹೇಳ್ತ್‌ತ ಅರ್ಥ ಆತ್‌ಲೆ. ಅಂವ ಹಿಂಗೆ ಉತ್ತರ ಕೊಟ್ಟತ್ತ್, ನಮ್ಮ ಮನೇಲಿ ಗೋಡೆಗೆ, ಬಲ್ಪ್‌ಗೆ ವಯರ್ ಎಳ್ದವೆ ನೀವ್ ನನ್ನ ತಲೆಗೆ ವಯರ್ ಎಳ್ದೊಳರಿತ ಹೇಳ್ತ್.

ಮತ್ತೊಮ್ಮೆ ಡಾಕ್ಟರ್ ಹಿಂಗೆ ಟೆಸ್ಟ್‌ಗೆ ಬಾಕನ ಹೊರಗೆ ಎಡ್ಮಿಷನ್ ರೂಂ ಲಿ ಗಂಟ್ ಮೂಟೆ ಕಟ್ಟಿ ಕುತ್ತ ಕುದ್ದುಟ್ ನರ್‌ಸ್‌ಗೂ ತಲೆ ತಿರ್‌ಗಿ ಅವ್ನ ಪುನಃ ಪುನಃ ನೋಡಿ, Your are a really brain surgen'ತ ಡಾಕ್ಟರ್ ಇಂಗ್ಲೀಷ್‌ಲಿ ಡಾಕ್ಟರ್ ಹೈದಂಗೆ ಹೇಳ್ದೋ. ಹೈದಂಗೆ ಡಾಕ್ಟರ್ 'ಬ್ರೈನ್'ತ ಹೇಳ್‌ಕಾಕನ ಆಗ ಅಂವ ಹೇಳ್ತ್. ನಮ್ಮನೇಲಿ ಬೈನೆ ಕಳ್ಳ್ ಕುಡ್ದ್. ಸರೀ ಇದ್ದೆ. ಇಲ್ಲಿ ನಾಲ್ಕೈದ್ ದಿನ ಮುಟ್ಟಿದೆ, ಸುಖ ಇಲ್ಲೆಂತ ಏಕ್‌ದಂ ಹೇಳಿ ಸೀದಾ ಬಸ್ ಹತ್ತಿ ಮಡಿಕೇರಿಗೆ ಬಾತ್. ಅಲ್ಲಿದ್ದ ನರ್‌ಸ್‌ಗ ರಪ್ಪಂತೇಳಿ ಸಿಡಿತಿರಗಿ ಬಿದ್ದಂಗೆ ಕಂಬಕೆ ಬಿದ್ದೊ. ಡಾಕ್ಟರ್ ಅವ್ನ ಭಾಷೆ ಅರ್ಥ ಆತ್‌ಲೆ. ಪುಣ್ಯಕ್ಕೆ ಡಾಕ್ಟರ್ ಸರೀ ಇತ್ತ್. ನರ್‌ಸ್‌ಗಳ್‌ನ ರಪ್ಪಂತೇಳಿ ಎಮರ್ಜೆನ್ಸೀ ರೂಂ(Emergency Room) ಗೆ ಸೇರ್‌ಸಿದೊ. ನೋಡಿ ಜನ್ರ ಅವಸ್ಥೆನ.

ಬರ್ದವ್ : ಸಂಧ್ಯಾ, ಪಿಲಿಗುಂಡ, ಪುತ್ತೂರು.

---

## ನಾನ್ ಪಿಚ್ಚರ್‌ಗೆ ಹೋದ ಕಥೆ

ಅಂದ್ ಶನಿವಾರ ನಾನ್ ಮತ್ತೆ ನನ್ನ ಚಡ್ಡಿದೋಸ್ತ್ ಪಿಚ್ಚರ್ ನೋಡಿಕೊಂಡ್ ಬರ್ನೊತೇಳಿ ಕ್ಲಾಸಲ್ಲೆ ಐಡಿಯಾ ಹಾಕ್ಕೊಂಡು ಬಂದೊ. ಬಂದು ನೋಡ್ಕನ ಕ್ಯೂ ಉದ್ದಕ್ಕು ಜನ ನಿತ್ತಿದ್ದೊ, ಕಡೆಗೆ ನಿಂತರೆ ಟಿಕೇಟ್ ಸಿಕ್ಕುಲೆತ್ತೆಲಿ ಅವರ ಮದ್ಯಲಿ ನುಗ್ಗಿಕೇ ನೋಡ್ದೊ. ಆಗ ಅಲ್ಲೊಬ್ಬ ಮರಾಯ " ಹೊಗ್ ಮಾರಯ ಕ್ಯೂಲಿ ಬಾ ನಾನ್ ಒಂದು ಗಂಟೆಂದ ಕಾಯುತ್ತ ಒಳೆ ಜಾಸ್ತಿ ಮಾತಾಡ್ರೆ ಕೊಟ್ಟನೆ ನೋಡ್ ದೌಡೆಗೆ ತ ಹೇಳೋಕಾ.

ಅವನತ್ರ ಮಾತಾಡ್ರೆ ನಮ್ಮ ಮೈ ಎಲ್ಲ ದಡಿ ಅದುತೇಲಿ ಪುನಃ ಕಡೆಗೆ ಕ್ಯೂಲಿ ನಿಂತೊ. ನಾವು ಕ್ಯೂಲಿ ಟಿಕೇಟ್ ಕೊಡುವವನ ಹತ್ರ ಹೋಕನ ಟಿಕೇಟ್ ಖಾಲಿಯಾತ್,

ಅಷ್ಟೊತ್ತಿಗೆ ಒಬ್ಬ ಹೈದ ಬ್ಲಾಕ್ ಟಿಕೇಟ್ ಮಾರ್ಕಂಡ್ ಬಾತ್. ಅವನತ್ರ ಎರ್ಡ್ ಟಿಕೇಟ್ ತಕಂಡೊ, ಅವನ ಕೈಗೆ 100ರ ಒಂದು ನೋಟು ಕೊಟ್ಟೊ. ಅಷ್ಟೊತ್ತಿಗೆ ಯಾರೋ ಒಬ್ಬ ಬಂದು ಅವನ ಕೈಯಿಂದ ಟಿಕೇಟ್ ಮತ್ತೆ ದುಡ್ಡು ಎಳ್ಕಂಡ್ ಅವನನ್ನ ಹಿಡ್ಕಂಡ್ ಹೋದೊ. ಅವ "ಇದ್ ನಮಗೆ ಸಾರ್ ಜನ ಇದ್ದಾರೆ" ಎಂತ ಪರ್‌ದಾಡ್‌ತ್. ಅಂವ ಬುಡದೆ ಅಂವನ ಕಪಾಲಕ್ಕೆ ಎರ್ಡ್ ಕೊಟ್ಟ್ ಜೀಪಿಲಿ ಕೂರ್‌ಸ್ತ್. ಆಗ ನಮಗೆ ಗೊತ್ತಾತ್ ಅಂವ ಪೋಲಿಸ್‌ತ್ತೆಳಿ.

ಇತ್ತ ನಾವು ಅತಿ ಆಸೆ ಗತಿಗೇಡ್ ಅನ್ನೊಂಗೆ ಟಿಕೇಟ್ ಇಲ್ಲದೆ, ದುಡ್ಡು ಇಲ್ಲದೆ, ಸೀದಾ ಮನೆಗೆ ಮುಖನ ಪೂಜಿಕಂಡ್ ಬಸ್ಸ್ ಹತ್ತಿದೊ.

— ನವೀನ ದೇರಳ, ಗಾಳಿಬೀಡು

---

# ಕಥೆ: ನರಭಕ್ಷಕ

ಮೈದು ಕಾಕ ಅರಣ್ಯದ ಪಕ್ಕದಲ್ಲಿ ಪೆಟ್ಟಿಗೆ ಅಂಗಡಿ ಇಟ್ಟು ಕೊಂಡಿದ್ದ. ಆತನ ಅಂಗಡಿಯ ಕಡೆಗೆ ಅಪರೂಪದಲ್ಲಿ ವಾಹನಗಳು ಬರುತ್ತಿದ್ದವು. ಪಟ್ಟಣಕ್ಕೆ ಹತ್ತಿರವಾಗಿ ಕಿರಿದಾದ ಕಾಲುದಾರಿಯೊಂದು ಅರಣ್ಯದ ಮಧ್ಯ ಭಾಗಕ್ಕಾಗಿ ಹಾದು ಹೋಗುತ್ತಿತ್ತು. ಪಟ್ಟಣದಿಂದ ಸುಮಾರು ಇಪ್ಪತ್ತು ಮೈಲು ದೂರದಲ್ಲಿ ಮೈದು ಕಾಕ ವಾಸವಾಗಿದ್ದನು. ಹಾಗಾಗಿ ಆತನ ಅಂಗಡಿಯಲ್ಲಿ ಹೆಚ್ಚೇನು ಸಾಮಾಗ್ರಿಗಳಿರಲಿಲ್ಲ. ಆದರೂ ಕಡಿಮೆ ಬೆಲೆಗೆ ಕಾಫಿ, ಟೀ ವ್ಯವಸ್ಥೆ ಇತ್ತು. ಈತನು ಹೆಂಡತಿ ಮತ್ತು ಮಗಳು ಫಾತಿಮ ತಂದೆಗೆ ಸಹಾಯರಾಗಿದ್ದರು. ಅಲ್ಲಿದ್ದ ಅರಣ್ಯದ ಗಾರ್ಡ್‌ಗಳು ಟೀ, ಕಾಫಿ ಕೊಳ್ಳುತ್ತಿದ್ದರು. ಅವರ ವಾಸ ಕೂಡ ಅಲ್ಲಿಯೇ ಇತ್ತು. ಆತನಿಗೆ ಒಬ್ಬ ಮಗನೂ ಇದ್ದ. ಆತನ ಹೆಸರು ಸಲಿಂ. ತನ್ನ 12ನೇ ವಯಸ್ಸಿನಲ್ಲಿ ಹೊಟೇಲಿನ ಹಿಂಬದಿಯ ಕಾಡಿಗೆ ಆಟವಾಡಲು ಹೋದವನು ಮತ್ತೆ ಮರಳಲಿಲ್ಲ! ಬಹಳ ಹುಡುಕಿದ ನಂತರ ಅಂಗಡಿಯಿಂದ ತುಂಬಾ ದೂರದಲ್ಲಿ ರಕ್ತದಿಂದ ಮುದ್ದೆಯಾಗಿ ಬಿದ್ದಿದ್ದ ಆತನ ಹರಿದ ಬಟ್ಟೆ ಸಿಕ್ಕಿತು. ಇದಾದ ನಂತರ ಮೈದು ತುಂಬಾ ಕಂಗಾಲಾಗಿದ್ದ. ಇದು ನಡೆದು ಸುಮಾರು ಎಂಟು ವರ್ಷ ಕಳೆದಿತ್ತು.

ಒಂದು ದಿನ ಮೈದು ಕಾಕನ ಅಂಗಡಿಗೆ ಒಂದು ಪತ್ರ ಬಂತು. ಕಾಡಿನ ಸೆಕ್ಯುರಿಟಿ ಗಾರ್ಡ್ ಒಬ್ಬ ತಂದು ಕೊಟ್ಟ. ಅದನ್ನು ಓದಿ ಮೈದುವಿನ ಮುಖ ಅರಳಿತು. ನಾಳೆ ನಮ್ಮ ಪಾತೀಮರನ್ನು ನೋಡಲು ಗಂಡಿನ ಕಡೆಯವರು ಬರುತ್ತಿದ್ದಾರೆ....! ಎಂದು ಜೋರಾಗಿ ಕೂಗಿಕೊಂಡ. ಮ ರುದಿನ ಬಾಡಿಗೆ ಜೀಪಿನಲ್ಲಿ ಗಂಡಿನ ಕಡೆಯವರು ಬಂದು ಇಳಿದರು. ಜೀಪು ಮರಳಿ ಹೊರಟಿತು. ಅವರು ಮೈದುವಿನ ಮಗಳನ್ನು ಒಪ್ಪಿಕೊಂಡರು. ಮೈದು ಸಂತಸದಿಂದ ಅವರನ್ನು ಬೀಳ್ಕೊಟ್ಟರು. ಅವರು ಕಾಲುದಾರಿಯ ಮುಖಾಂತರ ನಡೆದು ಹೊರಟರು. ಅವರು ಇದ್ದದ್ದು ಒಟ್ಟು ಮೂರು ಜನ. ತೆರಳಿದ 3-4 ಗಂಟೆಗಳಲ್ಲಿ ಮೈದು ಮನೆಗೆ ಪೋಲಿಸ್ & ಫಾರಿಸ್ಟ್ ಗಾರ್ಡ್‌ಗಳು ಒಂದಿಬ್ಬರು ಬಂದು, "ಮೈದು ನಿನಗೆ ಹೀಗಾಗ ಬಾರದಿತ್ತು"! ನಿನ್ನ ಮನೆಯಿಂದ ಮರಳಿದ ನೆಂಟರನ್ನು ದಾರಿಯಲ್ಲಿ ಯಾವುದೋ ಕಾಡುಪ್ರಾಣಿ ಎಳೆದೊಯ್ದಿದೆ ಎಂದರು! ಆಗ ಮೈದು ತನ್ನ ಮಗನನ್ನು ನೆನೆಸಿಕೊಂಡನು. ಆ ಸ್ಥಳಕ್ಕೆ ಹೋದಾಗ ಅಲ್ಲಿ ರಕ್ತ ಚೆಲ್ಲಿತ್ತೇ ಹೊರತು ಮತ್ತೇನು ಇರಲಿಲ್ಲ. ಉಳಿದ ಇಬ್ಬರು ಅಳುತ್ತಿದ್ದರು. ಆದರೆ ಮೈದುವಿಗೆ ತನ್ನ ಮಗ ಸತ್ತಾಗ ಆದಷ್ಟೇ ದುಃಖ ಈಗ ಆಗಲಿಲ್ಲ.

ಒಂದು ತಿಂಗಳು ಕಳೆದ ನಂತರ ಒಮ್ಮೆ ರಾತ್ರಿ ಹೊತ್ತು ಅಂಗಡಿ ಹಿಂದೆ ನೀರು ಸೇದಲು ಹೋದ ಪಾತೀಮ ಚೀರುತ್ತಾ ಪೊದೆಯೊಳಗೆ ಏನೋ ಓಡಿದಂತಾಯಿತು! ಎಂದು ಓಡಿ ತಂದೆಯ ಬಳಿಗೆ ಬಂದಳು. ಮೈದುವಿಗೆ ಏನೋ ಸಂದೇಹ ಉಂಟಾಗಿ ಅಂಗಡಿಯ ಎಲ್ಲಾ ದೀಪಗಳನ್ನು ಆರಿಸಿ ಬಾಗಿಲು ಭದ್ರ ಪಡಿಸಿಕೊಂಡು ಬಿಟ್ಟ !

ಈ ವಿಷಯದ ಕುರಿತು ಮೈದು ತನ್ನ ಆಪ್ತ ಸ್ನೇಹಿತ ಶಂಕರ್‌ಗೆ ಪತ್ರ ಬರೆದ. ಆತ ಒಬ್ಬ ಬೇಟೆಗಾರ. ಅರಣ್ಯ ಇಲಾಖೆಯಿಂದ ಆತ ಬೇಟೆಗಾರನಾಗಿ ನೇಮಿಸಲ್ಪಟ್ಟಿದ್ದ. ಮರುದಿನವೇ ಶಂಕರ್ ತನ್ನ ಬಂದೂಕು ಸಹಿತವಾಗಿ ಮೈದುವಿನ ಅಂಗಡಿಗೆ ಬಂದ. ಮೈದು ನಡೆದ ಎಲ್ಲಾ ವಿಷಯವನ್ನು ಶಂಕರ್‌ಗೆ ತಿಳಿಸಿದ. ಉಳಿದುಕೊಳ್ಳಲು ಅಂಗಡಿಯಿಂದ ಸ್ವಲ್ಪ ದೂರದಲ್ಲಿದ್ದ ಪ್ರವಾಸಿಗರೇ ಇಲ್ಲದ ಪ್ರವಾಸಿ ನಿವಾಸಕ್ಕೆ ಕಳುಹಿಸಿದ. ಬೇಸಿಗೆ ಕಾಲವಾದದ್ದರಿಂದ ಶಂಕರ್ ಕೊಠಡಿಯೊಳಗೆ ಉಳಿಯದೆ ಲುಂಗಿ ಹಾಕಿಕೊಂಡು ಹೊರಗಿನ ವರಾಂಡದಲ್ಲಿ ಕುಳುತಿದ್ದನು. ದೂರದಿಂದ ಟಾರ್ಚ್‌ನ ಬೆಳಕು ಕಾಣಿಸಿತು. ಶಂಕರ್ ಎಂದು ನಿಂತು ನೋಡಿದ! ಮೈದು ಭಯದಿಂದ ಬರುತ್ತಿದ್ದ.

ಏನೋ ಮೈದು? ಎಂದು ಶಂಕರ್ ಕೇಳಿದ. ಅಂಗಡಿ ಎದುರು ಫಾರೆಸ್ಟ್ ಗಾರ್ಡ್ ಒಬ್ಬ ಡ್ಯುಟಿಮುಗಿಸಿ ಮರುಳುತ್ತಿದ್ದಾಗ ಆತನನ್ನು ಹುಲಿ ಹಿಡಿದಿದ್ದನ್ನು ನಾನು ನೋಡಿದೆ ಎಂದನು. ಲುಂಗಿಯಲ್ಲಿದ್ದ ಶಂಕರ್ ಪ್ಯಾಂಟು ಷರ್ಟು ಧರಿಸಿ ತನ್ನ ಬಂದೂಕನ್ನು ಹೆಗಲಿಗೇರಿಸಿ ಟಾರ್ಚ್ ಸಹಿತವಾಗಿ ಮೈದುವಿನೊಂದಿಗೆ ಅಂಗಡಿ ಬಳಿ ಬಂದ, ಅಲ್ಲಿ ಗಾರ್ಡ್‌ನ ಕೈಯಲ್ಲಿದ್ದ ದೊಣ್ಣೆ, ಕತ್ತಿ ಬಿದ್ದಿತ್ತು. ಸ್ವಲ್ಪ ದೂರದಲ್ಲಿ ಕುರುಚಲು ಗಿಡಗಳು ಬಾಗಿದ್ದವು. ಮೈದುವನ್ನು ಮನೆಗೆ ಕಳುಹಿಸಿ ಶಂಕರ್ ನೇರವಾಗಿ ಹುಲಿ ಹೋದ ಕಡೆ ಓಡಿದ. ಮುಂದೆ ಹೋಗುತ್ತಿದ್ದಂತೆ ಬಯಲು ಆವರಿಸಿತ್ತು. ಚಿಕ್ಕ ಚಿಕ್ಕ ಮರಗಳು ಪೊದೆಗಳು ಇದ್ದವು. ಶಂಕರ್ ಬಹಳ ಹುಡುಕಿದರೂ ಏನೂ ಸುಳಿವು ಸಿಗಲಿಲ್ಲ. ಆಯಾಸಗೊಂಡ ಶಂಕರ್ ಒಂದು ಪುಟ್ಟ ಕೊಳದ ಬಳಿ ಇದ್ದ ಚಿಕ್ಕ ಮರವನ್ನು ಹತ್ತಿ ಕುಳಿತು ಕೊಂಡನು. ಚಂದ್ರನ ಬೆಳಕು ನೇರವಾಗಿ ಶಂಕರ್‌ನ ಮೇಲೆ ಬೀಳುತ್ತಿತ್ತು. ಕೈಗಡಿಯಾರ ನೋಡಿದಾಗ ಸಮಯ ಹನ್ನೆರಡು ಆಗಿತ್ತು. ಯಾವುದೇ ಪ್ರಾಣಿ ಏನಾದರೂ ತಿಂದನಂತರ ನೀರು ಕುಡಿಯಲು ಬಂದೇ ಬರುತ್ತದೆ ಎಂದು ತಿಳಿದಿದ್ದನು. ಚಂದ್ರನ ಬೆಳಕಿನಿಂದ ಸ್ವಲ್ಪ ಮರೆಯಾಗಿ ಕುಳಿತು ಕೊಂಡ ಶಂಕರ್. ಆತನಿಂದ ದೂರದಲ್ಲಿ ಮಂಗಗಳು ಕಿರುಚುತ್ತಿದ್ದವು. ಜೀರುಂಡೆಯು ಶಂಕರ್‌ನನ್ನು ಸುತ್ತು ಹಾಕುತ್ತಿತ್ತು. ಇದ್ದಕಿದ್ದಂತೆ "ಬರ್..." ಎಂದು ಸದ್ದಾಯಿತು. ಪಕ್ಕದ ಮರದಲ್ಲಿದ್ದ ಪಕ್ಷಿಯೊಂದು "ಪಟ ಪಟ".. ಹಾರಿತು. ಟಾರ್ಚ್ ಕತ್ತಿಸಿ ನೋಡಿದಾಗ ಕೊಳದಿಂದ ಆಚೆ ಕಪ್ಪಗೆ ಏನೋ ಕಂಡಂತಾಯಿತು. ಮರದಿಂದ ಮೆಲ್ಲಗೆ ಇಳಿದು ನೋಡಿದ. "ಲಟ ಪಟ.. ಎಂದು ಸದ್ದು ಮಾಡುತ್ತಾ ಎದುರಿನಿಂದ ಕಾಡಿನ ಮರೆಯಲ್ಲಿ ಏನೋ ಹತ್ತಿರ ಬರುತ್ತಿತ್ತು. ಶಂಕರ್ ಮೆಲ್ಲನೆ ತನ್ನ ಬಂದೂಕನ್ನು ಮೇಲೆತ್ತಿ ಹಿಡಿದು ನೀರಿನ ಒಳಗೆ ಇಳಿದನು. ತನ್ನ ಎದೆ ಮಟ್ಟಕ್ಕಿದ್ದ ನೀರಿನ ಮಧ್ಯ ನಿಂತ. ಯಾವ ಪ್ರಾಣಿಯಾದರೂ ನೀರಿನಲ್ಲಿ ಇಳಿಯ ಬೇಕಾದರೆ ಸ್ವಲ್ಪ

ಉಪ್ಪು ತಿಂದವ ನೀರ್ ಕುಡ್ದೆ ಕುಡಿಯಕು

ಸಮಯ ಹಿಡಿಯುತ್ತದೆ. ಅಷ್ಟರಲ್ಲಿ ತಾನು ಏನಾದರೂ ಟ್ರಿಕ್ ಮಾಡ ಬಹುದು ಎಂದು ಕೊಂಡನು. ಕೂಡಲೇ ಹಿಂದಿನಿಂದ ಜುಳು ಜುಳು... ಎಂದು ಸದ್ದಾಯಿತು. ಸರ್ರನೆ ತಿರುಗಿ ನೋಡಿದಾಗ ಹೆಬ್ಬಂಡೆ ಗಾತ್ರದ ಆನೆಯೊಂದು ಈತನ ಕಡೆ ನುಗ್ಗಿಬಂತು.

ಅವಸರದಲ್ಲಿ ಶಂಕರ್ ತನ್ನ ಟಾರ್ಚ್‌ನ್ನು ನೀರಿನ ಒಳಗೆ ಬೀಳಿಸಿ ಬಿಟ್ಟ. ಆನೆ ಈತನ ಕಡೆಗೆ ಬರುತ್ತಿತ್ತು. ಚಂದ್ರನ ಮುಸುಕು ಬೆಳಕಿನಲ್ಲಿ ಆನೆಯ ಮೇಲೆ ಕನಿಕರ ತೋರಿ ಅದರ ಬಲ ಕಿವಿಗೆ ಗುಂಡು ಹಾರಿಸಿದನು, ಆನೆ ಹೆದರಿ ಗೀಳಿಡುತ್ತಾ ತಿರುಗಿ ಓಡ ತೊಡಗಿತು. ಅದು ಗೀಳಿಡುವ ಶಬ್ದಕ್ಕೆ ಮಂಗಗಳು ಕತ್ತಲಲ್ಲಿ ಕಿರುಚಿ ಕೊಂಡವು. ನಂತರ ಶಂಕರ್ ತನ್ನ ಬಂದೂಕನ್ನು ದಡದಲ್ಲಿ ತಂದಿಟ್ಟು ಮೆಲ್ಲನೆ ಹೋಗಿ ತನ್ನ ಟಾರ್ಚ್‌ನ್ನು ನೀರಿನಿಂದ ತೆಗೆದು ಕೊಂಡು ಪ್ರವಾಸಿ ನಿವಾಸದ ಕಡೆಗೆ ಹೊರಟ.

ನಿವಾಸಕ್ಕೆ ಬಂದಾಗ ಸಮಯ 3-30 ಬಂದ ಕೂಡಲೇ ಬಟ್ಟೆ ಬದಲಾಯಿಸಿ, ಟಾರ್ಚ್‌ನಿಂದ ಬ್ಯಾಟರಿ ತೆಗೆದು ಮಲಗಿದ. ಮರುದಿನ ಬೆಳಗ್ಗೆ ಅರಣ್ಯ ಅಧಿಕಾರಿಗಳ ಬಳಿ ಹೋಗಿ ಅರಣ್ಯದ ನಕ್ಷೆಯನ್ನು ನೋಡಿ ಅದರ ಬಗ್ಗೆ ಪೂರ್ತಿ ವಿವರಣೆ ಪಡೆದನು. ಅರಣ್ಯ ಅಧಿಕಾರಿ ಶಂಕರ್‌ಗೆ ಆ ನರಭಕ್ಷಕ ಹುಲಿಯ ಬಗ್ಗೆ ತಿಳಿಸಿದರು. ಆ ಹುಲಿ ಎಂಟು ವ ರ್ಷದ ಹಿಂದೆ ನರಭಕ್ಷಕನಾಗಿ ಇದೇ ಕಾಡಿನಲ್ಲಿತ್ತು. ನಂತರ ಸ್ವಲ್ಪ ಸಮಯ ಎಲ್ಲೋ ಹೋಗಿತ್ತು. ಈಗ ಮತ್ತೆ ಬಂದಿದೆ ಎಂದನು.

ಅಷ್ಟರಲ್ಲಿ ಅಧಿಕಾರಿ ಎದುರಿನಿಂದ ಪೀವನ್ ಒಬ್ಬ ಬಂದು ಪಾರಿಸ್ಟ್ ಗಾರ್ಡಿನ ಅರ್ಧತಿಂದ ದೇಹ ಕಾಡಿನಲ್ಲಿ ಸಿಕ್ಕಿದೆ ಎಂದನು. ಕೂಡಲೇ ಅವರೆಲ್ಲರೂ ಜೀಪಿನಲ್ಲಿ ಮೃತ ದೇಹದ ಬಳಿಗೆ ದಾವಿಸಿದರು. ಆ ದೇಹವು ಚಿದ್ರ ಚಿದ್ರವಾಗಿತ್ತು.

ಹಿಂತಿರುಗಿ ಬಂದ ಅವರು ಶಂಕರ್‌ನನ್ನು ಪ್ರವಾಸಿ ನಿವಾಸದ ಬಳಿ ಬಿಟ್ಟು ಹೋದರು. ಆದಿನ ರಾತ್ರಿ ಶಂಕರ್ ಕಾಡಿನ ಕೆಲವೆಡೆ ಸುತ್ತಾಡಿದ. ಅಲ್ಲಿ ಏನು ಸಿಗಲಿಲ್ಲ. ಒಂದು ವಾರವಾದರೂ ಆ ಹುಲಿಯ ಸದ್ದಿರಲಿಲ್ಲ. ಒಂದು ದಿನ ಕಳೆದ ನಂತರ ಶಂಕರ್ ಮೈದುಕಾಕನ ಅಂಗಡಿಗೆ ಹೋಗಿ ಬರುತ್ತಿದ್ದ. ಸುಮಾರಾಗಿ ಸಂಜೆಯ ಸಮಯ, ಹಿಂದಿನಿಂದ ಯಾರೋ ಓಡಿ ಬಂದಂತಾಯಿತು. ತಿರುಗಿದಾಗ ಮೈದು! ಏನಾಯಿತೋ? ಎಂದಾಗ

ನನ್ನ ಬೇಗಂ ನನ್ನು ಹುಲಿ ಎಳೆದೊಯ್ದಿದೆ!ಎಂದ ಶಂಕರ್ ಕೂಡಲೇ ತನ್ನ ಪ್ರವಾಸಿ ನಿವಾಸಕ್ಕೆ ದಾವಿಸಿ ಬಂದೂಕು ತೆಗೆದು ಕೊಂಡು ಬಂದ.

ಅಂಗಡಿಯ ಹಿಂಬದಿಗೆ ಬಂದಾಗ ಪಾತ್ರೆಗಳೆಲ್ಲಾ ಚೆಲ್ಲಾಡಿದ್ದವು. ನೀರು ತುಂಬಿದ್ದ ಬಿಂದಿಗೆ ಒಡೆದು ಹೋಗಿತ್ತು. ಆಕೆಯ ಒಂದು ಕಾಲಿನ ಚಪ್ಪಲಿ ಬಾವಿಯ ಬಳಿ ಬಿದ್ದಿತ್ತು. ದಟ್ಟವಾದ ಕುರುಚಲು ಪೊದೆಯ ಒಳ ಬದಿಗಾಗಿ ಹುಲಿಯು ಆಕೆಯನ್ನು ಎಳೆದು ಕೊಂಡು ಹೋಗಿತ್ತು. ಶಂಕರ್ ಹುಲಿ ಹೋದ ಆ ಪೊದೆಯ ಒಳಗೆ ನುಗ್ಗುತ್ತಾ ನುಗ್ಗುತ್ತಾ ಮುಂದುವರೆದ.

ಅದು ಗುಹೆಯಂತಿತ್ತು. ಅನೇಕ ಬಾರಿ ನಡೆದು ನಡೆದು ಆ ದಾರಿ ಸವೆದಂತಿತ್ತು. ತನ್ನ ಕಾಲಿಗೆ ಏನೋ ಸಿಕ್ಕಿದಂತಾಗಿ ಶಂಕರ್ ತಿರುಗಿದಾಗ ಆಕೆಯ ಎಡಗಾಲಿನ ಚಪ್ಪಲಿ ಅಲ್ಲಿ ಬಿದ್ದಿತ್ತು. ಅಲ್ಲಿ ಸ್ವಲ್ಪ ರಕ್ತವೂ ಸೋರಿತ್ತು.

ಆಕೆಯ ಬಟ್ಟೆಯು ಆ ಪೊದೆಯ ಮುಳ್ಳುಗಳಿಗೆ ಸಿಲುಕಿ ಹರಿದು ಅಲ್ಲಲ್ಲಿ ನೇತಾಡುತ್ತಿದ್ದವು. ಅಂತೂ ಶಂಕರ್ ಪೊದೆಯಿಂದ ಹೊರಬಂದ. ಎದುರಿನಲ್ಲಿ ದೊಡ್ಡ ಬಯಲು, ಎರಡು ಮೂರು ದೊಡ್ಡ ಮರಗಳು ದೊಡ್ಡದೊಂದು ಬಂಡೆ, ಇದ್ದವು. ಮರದ ಮೇಲೆ ಎರಡು ಕಾಗೆಗಳು ಬಂಡೆಯ ಎಡೆಗೆ ಏನೋ ಇರುವಂತೆ ನೋಡುತ್ತಿದ್ದವು. ಶಂಕರ್‌ಗೆ ಹುಲಿ ಅಲ್ಲೇ ಇದೆ. ಹುಲಿ ತಿನ್ನುತ್ತಿರುವ ಮಾಂಸದ ಕಡೆ ಆ ಕಾಗೆಗಳು ನೋಡುತ್ತಿವೆ ಎಂದು ತಿಳಿದನು. ತನ್ನ ಬಂದೂಕನ್ನು ಎದೆ ನೇರಕ್ಕೆ ಹಿಡಿದು ಟ್ರಿಗರ್ ಮೇಲೆ ತನ್ನ ತೋರು ಬೆರಳಿಟ್ಟು ಬಂಡೆ ಬಳಿಗೆ ಬಂದನು. ಅಷ್ಟರಲ್ಲಿ ಮರದ ಮೇಲಿದ್ದ ಎರಡು ಕಾಗೆಗಳು ಶಂಕರ್‌ನನ್ನು ಕಂಡು ಕಾ, ಕಾ, ಎಂದು ಹೆದರಿದಂತೆ ಕೂಗುತ್ತಾ ಹಾರಿದವು. ಶಂಕರ್ ಬಂಡೆ ಹಿಂಬದಿಯಲ್ಲಿ ನೋಡಿದಾಗ ಆಕೆಯ ಶವ ಮಾತ್ರ ರಕ್ತ ಪೂರಿತವಾಗಿ ಅಲ್ಲಿ ಬಿದ್ದಿತ್ತು. ಪಕ್ಕದ ಪೊದೆಯೊಂದರಲ್ಲಿ "ಸರ್" ಎಂದು ಸದ್ದಾಯಿತು! ಕಾಗೆಗಳು ಕೂಗಿಕೊಂಡು ಹಾರುವ ಶಬ್ದಕ್ಕೆ ಹುಲಿಯ ಸಂದೇಹದಿಂದ ಆ ದೇಹವನ್ನು ಬಿಟ್ಟು ಪೊದೆಯಲ್ಲಿ ಅವಿತಿತ್ತು. ಅತ್ತ ಕಡೆ ನೋಡಿಕೊಂಡು ಶಂಕರ್ ಮೆಲ್ಲನೆ ಹಿಂದಕ್ಕೆ ತಿರುಗಿ ನಿಂತನು. ಬಂದೂಕಿನ ಹಿಡಿತವನ್ನು ಬಿಗಿ ಗೊಳಿಸಿದನು. ಪುನಃ ಮತ್ತೊಮ್ಮೆ ಪಟ್ ಎಂದು ಕಡ್ಡಿ ಮುರಿದ ಶಬ್ದವಾಯಿತು.

ಹುಲಿ ತನ್ನನ್ನು ಹಿಡಿಯಲು ಹೊಂಚು ಹಾಕುತ್ತಿದೆ ಎಂದು ತಿಳಿದ ಶಂಕರ್ ಮೆಲ್ಲನೆ ತಿರುಗಿದ.

ಎಲ್ಲೋ ಒಮ್ಮೆ ಬೇಟೆಗೆ ಹೋಗಿದ್ದಾಗ ಹುಲಿಯು ಜಿಂಕೆಯ ಮೇಲೆ ಹಾರಲು ಮಾಡಿದ ಉಪಾಯ ನೆನಪಿಗೆ ಬಂದಿತು. ಅದರಂತೆ ನಿಂತಲ್ಲಿಂದ ಒಮ್ಮೆಲೆ ಓಡಿದಂತೆ ಮಾಡಿ ನಿಂತು ಹಿಂದಕ್ಕೆ ತಿರುಗಿದಾಗ ಹುಲಿಯು ಪೊದೆಯಿಂದ ಹೊರ ಬಂದು ಆತನ ಮೇಲೆ ಹಾರಲು ಸಿದ್ದವಾಗಿತ್ತು. ಶಂಕರ್ ಒಮ್ಮೆ ನಿಂತದ್ದರಿಂದ ಹುಲಿಯು ಈತನ ಮೇಲೆ ಹಾರಲು ಇಟ್ಟಿದ್ದ ಗುರಿ ತಪ್ಪಿದಂತಾಗಿ ಹಾರದೇ ಅಲ್ಲೇ ನಿಂತಿತು. ಕೂಡಲೇ ಶಂಕರ್ ಮಿಂಚಿನ ವೇಗದಲ್ಲಿ ಢಂ!ಢಂ! ಎಂದು ಎರಡು ಗುಂಡು ಹಾರಿಸಿದ ಹುಲಿ ಅಲ್ಲೇ ಹೊರಳಿಬಿದ್ದಿತು. ಗುಂಡಿನ ಶಬ್ದ ಕೇಳಿದ ಮೈದು ಕಾಕ, ಅವನ ಮಗಳು ಮತ್ತು ಇನ್ನು ಕೆಲವು ಅರಣ್ಯಾಧಿಕಾರಿಗಳು ಅಲ್ಲಿಗೆ ಓಡಿ ಬಂದರು. ಶಂಕರ್ ಬಂದೂಕನ್ನು ಪುನಃ ಲೋಡ್ ಮಾಡಿ ಹುಲಿ ಸತ್ತಿದೆಯೋ ಇಲ್ಲವೋ! ಎಂದು ಸಂಶಯದಿಂದ ಹತ್ತಿರ ಬಂದಾಗ ಹುಲಿ ಸತ್ತಿತ್ತು. ಎಲ್ಲರೂ ಹುಲಿ ಸತ್ತಿತೆಂದು ಸಂತೋಷದಿಂದಿದ್ದರು. ಆದರೆ ಮೈದು ಮತ್ತು ಫಾತೀಮರು ಕಣ್ಣಲ್ಲಿ ನೀರು ಸುರಿಸುತ್ತಾ ನಿಂತಿದ್ದರು.

— ತಳೂರು ಸುಧಿ ಬಾಲಕೃಷ್ಣ, ಮಡಿಕೇರಿ.

**ಅತ್ತೆಗೆ ಒಂದ್ ಕಾಲ ಆದರೆ, ಸೊಸೆಗೆ ಒಂದ್ ಕಾಲಗಡ**

# ಕಾಡಾನೆಗೆ ಮಾಡಿದರು ಪೂಜೆ

ಲೇಖಕಿ : ಬೈತಡ್ಕ ಹೇಮ ಕುಂಜ್ಞಪ್ಪ.

ಕಾವೇರಿನದಿಯ ಉಗಮಸ್ಥಾನವಾದ ಬ್ರಹ್ಮಗಿರಿಯ ತಪ್ಪಲಿನಲ್ಲಿ ನಮ್ಮ ಗ್ರಾಮ ಸಾವಿರಾರು ಏಕ್ರೆ ವಿಸ್ತಾರದ ನಿತ್ಯವೂ ಹಸಿರಾಗಿರುವ ದಟ್ಟ ಅರಣ್ಯ ನಮ್ಮ ಗ್ರಾಮಕ್ಕೆ ತಾಗಿಕೊಂಡಿದೆ. ಗ್ರಾಮಸ್ತರು ತಮ್ಮ ಖಾಸಗಿ ಆಸ್ತಿಯಲ್ಲಿ ಯಾಲಕ್ಕಿ ಮತ್ತು ಕಾಫಿ ತೋಟಗಳನ್ನು ಮಾಡಿಕೊಂಡಿದ್ದಾರೆ. ನಾಗರಿಕತೆಯ ವಿಷಗಾಳಿ ಇವರನ್ನು ಇನ್ನೂ ಸಂಪೂರ್ಣ ಕೆಡಿಸಿಲ್ಲ. ಶುದ್ಧ ಹವೆಯ ಅಲ್ಹಾದಕರ ವಾತಾವರಣ ಇನ್ನೂ ಉಳಿದಿದೆ. ನಂಬಿಕೆ, ಮೂಢ ನಂಬಿಕೆ, ಪ್ರೀತಿ, ವಿಶ್ವಾಸ, ಪರಸ್ಪರ ಸಹಕಾರ ಭಾವನೆ ಎಲ್ಲ ಇನ್ನೂ ಕರಗದೆ ಇಲ್ಲಿ ಹೆಪ್ಪುಗಟ್ಟಿ ನಿಂತಿದೆ.

ಮಂದಪ್ಪಣ್ಣನ ಏಲಕ್ಕಿತೋಟ ದಟ್ಟ ಅರಣ್ಯಕ್ಕೆ ತಾಗಿ ಕೊಂಡಿದೆ. ತೋಟಕ್ಕೆ ಬೇಲಿಯಾಗಿ ಒಂದು ಕಡೆಯಲ್ಲಿ ಕಾಡುಕಲ್ಲು ಗಳಿಂದ ಕಟ್ಟೆಕಟ್ಟಿದ್ದಾರೆ. ಉಳಿದಕಡೆ ಕಾಡು ಬೇಲಿ ಕಲ್ಲು ಕಟ್ಟೆಯಿರುವಲ್ಲಿ ಒಂದುಕಡೆ ಸುತ್ತಲೂ 7-8 ಅಡಿಗಳಷ್ಟು ಇಳಿಜಾರಾಗಿ ತಳದಲ್ಲಿ 150-200 ಅಡಿಗಳಷ್ಟು ವಿಸ್ತಾರವಾದ ಒಂದು ತಗ್ಗು ಪ್ರದೇಶವಿದೆ. ಈ ತಗ್ಗು ಪ್ರದೇಶಕ್ಕೆ ಇಳಿದರೆ ಮೇಲೆ ಬರುವುದು ಪ್ರಯಾಸದ ಕೆಲಸ. ಏಲಕ್ಕಿ ಗಿಡಗಳ ಬಳಿಗೆ ಹೋಗಿಬರಲು ಒಂದು ಕಾಲುದಾರಿ ಬಿಟ್ಟರೆ ಈ ಹೊಂಡಕ್ಕೆ ಹೋಗಿ ಬರಲು ಬೇರೆದಾರಿ ಇಲ್ಲ.

ಕೆಲವು ವರ್ಷಗಳ ಹಿಂದೆ ಒಂದು ದಿನ ಮಂದಪ್ಪಣ್ಣ ಎಂದಿನಂತೆ ತೋಟಕ್ಕೆ ಹೋಗಿದ್ದರು. ಏಲಕ್ಕಿಗಿಡಗಳಿಗೆ ಕಾಟಕೊಡು ತ್ತಿದ್ದ ಮಂಗಗಳನ್ನು ಬೆದರಿಸಿಕೊಂಡು ಆ ತಗ್ಗಿನ ಕಡೆಗೆ ಬಂದರು. ತಗ್ಗಿನೊಳಗೆ ಒಂದು ದೊಡ್ಡ ಆನೆಯನ್ನು ಕಂಡು ಅವರಿಗೆ ಆಶ್ಚರ್ಯ ವಾಯಿತು. ಅದು ಸುಮ್ಮನೆ ನಿಂತಿದ್ದು ಕಿವಿಗಳನ್ನು ಆಡಿಸುತ್ತಿತ್ತು.

ನಮ್ಮ ಗ್ರಾಮಸ್ತರಿಗೆ ಆನೆ ಆಶ್ಚರ್ಯದ ಪ್ರಾಣಿಯಲ್ಲ. ದಟ್ಟ ಅರಣ್ಯದೊಳಗೆ ಅವುಗಳ ಹಿಂಡುಗಳೇ ಇವೆ. ಆದರೆ ಅವುಗಳು ಗ್ರಾಮದೊಳಗಿರುವ ತೋಟಗಳಿಗೆ ಬರುವುದು ತುಂಬ ಅಪರೂಪ. ಒಮ್ಮೊಮ್ಮೆ ಬಂದರು ನಿಲ್ಲುವುದಿಲ್ಲ. ಬೇಕಾದು ದನ್ನು ತಿಂದು ತಮ್ಮಿಷ್ಟಕ್ಕೆ ತಾವೇ ಕಾಡಿನೊಳಗೆ ಹೋಗಿಬಿಟ್ಟಿರು ತ್ತವೆ. ವಿಷಯ ಹೀಗಿರುವಾಗ ತಗ್ಗಿನೊಳಗೆ ಬಂದು ಆನೆ ಸುಮ್ಮನೆ ನಿಂತಿರುವುದಕ್ಕೆ ಮಂದಪ್ಪಣ್ಣನಿಗೆ ಆಶ್ಚರ್ಯವಾಗಿತ್ತು.

ಅವರಿಗೆ ಯೋಚನೆ ಸುರುವಾಯಿತು. ಒಂಟಿ ಆನೆ ತಿರುಗಾಟದಲ್ಲಿ ಏನಾದರು ಇಲ್ಲಿ ಬಂದುಬಿಟ್ಟಿದೆಯೇ? ಒಂಟಿ ಆನೆ ಎಂದಮೇಲೆ ಕೋರೆಗಳು ಇರಬೇಕು ಆದರೆ ಅದಕ್ಕೆ ಕೊಂಬುಗಳಿರ ಲಿಲ್ಲ. ಅಂದರೆ ಹೆಣ್ಣಾನೆ. ಹೆಣ್ಣುಕಾಡಾನೆ ಒಂಟಿಯಾಗಿರುವು ದಿಲ್ಲ. ಅರಣ್ಯ ಇಲಾಖೆಯವರು ಮೇಯಲು ಬಿಟ್ಟ ಸಾಕಿದ ಆನೆ ಇರಬಹುದೆ? ಅರಣ್ಯ ಇಲಾಖೆ ತುಂಬ ದೂರದಲ್ಲಿರುವಾಗ ಅವರ ಆನೆ ಈ ಹೊಂಡದೊಳಗೆ ಮೇಯಲು ಬರುವುದು ಹೇಗೆ? ಒಂದು ವೇಳೆ ಹೇಗೋ ಬಂದು ಬಿಟ್ಟಿದ್ದರೆ ಹುಡುಕದೆ ಬಿಡುತ್ತಾರೆಯೇ? ಮಂದಪ್ಪಣ್ಣನ ಸಂದೇಹ ಬಗೆಹರಿಯಲಿಲ್ಲ.

ಮನೆಗೆ ಬಂದು ಆನೆ ಇರುವ ವಿಷಯವನ್ನು ಹೆಂಡತಿಗೆ ಹೇಳಿದರು. ಗಂಡ ಹೆಂಡತಿ ಇಬ್ಬರು ಹತ್ತಿರದ ನೆರಮನೆಗೆ ಹೋಗಿ ಬಿದ್ದಪ್ಪ ದಂಪತಿಗಳಿಗೆ ತೋಟದಲ್ಲಿ ಆನೆ ಇರುವ ವಿಷಯ ತಿಳಿಸಿದರು. ಆ ಬಗ್ಗೆ ಏನೇನೋ ಚರ್ಚೆ ನಡೆಯಿತು. ಕಡೆಗೆ ಆನೆ ಅಲ್ಲಿಯೇ ಇದೆಯೋ ಎಂದು ನೋಡಿ ಬರೋಣ ಎಂದು ಮಂದಪ್ಪಣ್ಣ ಮತ್ತು ಬಿದ್ದಪ್ಪ ಮತ್ತೆ ತೋಟಕ್ಕೆ ಹೋದರು. ಆನೆ ಅಲ್ಲಿಯೇ ಇತ್ತು. ಸದ್ದು ಮಾಡದೆ ಸುಮಾರು ಒಂದು ಗಂಟೆ ಅದೇನು ಮಾಡುತ್ತಿದೆ ಎಂದು ಗಮನಿಸಿದರು. ಅದು ತುಂಬ ಬಡಕಲಾಗಿರುವಂತೆ ಕಂಡಿತು ಹೆಚ್ಚು ಚಟುವಟಿಕೆಯಿಂದಿದ್ದಂತೆ ಕಾಣಲಿಲ್ಲ. ಸುಮ್ಮನೆ ವಾಪಾಸು ಬಂದರು.

ಮಾರನೆಯ ದಿನ ಮತ್ತೆ ಹೋಗಿ ನೋಡಿದರು ಅದು ಅಲ್ಲಿಯೇ ಇತ್ತು. ಅವರಿಗೆ ಆಶ್ಚರ್ಯವಾಯಿತು ಏಕೆಂದರೆ ಕಾಡಾನೆ ಇದ್ದಲ್ಲಿಯೇ ಇರುವುದಿಲ್ಲ. ಸಿಕ್ಕಿದ್ದನ್ನು ತಿಂದು ಅಲ್ಲಿಂದ ಹೋಗಿ ಬಿಡುತ್ತದೆ. ಸಾಮಾನ್ಯ ಆನೆ ಹಿಂಡು ಬಿಟ್ಟು ಹೀಗೆ ಒಂಟಿಯಾಗಿ ಇರುವುದಿಲ್ಲ. ಅದೂ ಒಂದು ದೊಡ್ಡ ಹೊಂಡದಂತ ಪ್ರದೇಶದಲ್ಲಿ ಮಾರನೆಯ ದಿನವೂ ಇದೆಯೆಂದ ಮೇಲೆ ವಿಶೇಷವೇ ಆಗಿತ್ತು. ನೋಡೋಣವೆಂದು ಮಂದಪ್ಪಣ್ಣ ಒಂದು ಸಣ್ಣ ಬಾಳೆಗೊನೆಯನ್ನು ಮುರಿದು ತಂದು ಅದರ ಕಾಲಬುಡಕ್ಕೆ ಬೀಸಿ ಎಸೆದರು. ಗೊನೆ ಬಿದ್ದ ಸದ್ದಿಗೆ ಆನೆ ತಿರುಗಿತು. ಗೊನೆಯನ್ನು ಸೊಂಡಿಲಿನಿಂದ ಪರೀಕ್ಷಿಸಿ ತಿನ್ನಲು ಯೋಗ್ಯವೆಂದು ಕಂಡಮೇಲೆ ಎತ್ತಿ ಬಾಯಿಗೆ ಹಾಕಿಕೊಂಡಿತು. ಇಬ್ಬರೂ ಏನೇನೋ ಚರ್ಚಿಸಿಕೊಂಡು ಆನೆಯ ಬಗ್ಗೆ ಯಾವ ನಿರ್ಣಯಕ್ಕೂ ಬರಲು ಸಾಧ್ಯಾವಾಗದೆ ಮನೆಗಳಿಗೆ ಬಂದರು.

ಮಂದಪ್ಪಣ್ಣನ ತೋಟದಲ್ಲಿ ಆನೆ ಇರುವ ಸುದ್ದಿ ಹೇಗೋ ಊರಿನ ತುಂಬ ಹರಡಿತು. ಇಷ್ಟಾದರೆ ತೊಂದರೆ ಇರಲಿಲ್ಲ. ಅದು ಬರಿ ಆನೆಯಲ್ಲ, ಗಣಪತಿ ಆನೆಯ ರೂಪದಲ್ಲಿ ಬಂದು ನಿಂತಿದ್ದಾನೆ ಎಂಬ ಸುದ್ದಿ ಎಲ್ಲಿಯೋ ಹುಟ್ಟಿ, ಹೇಗೋ ಬೆಳೆದು ಊರಲೆಲ್ಲ ತುಂಬಿ ಗ್ರಾಮಸ್ತರ ಕಿವಿಯನ್ನು ನಿಮಿರಿಸಿತು. ಆನೆರೂಪಿ ಗಣಪತಿ ಯನ್ನು ಕಾಣಲು ಎಲ್ಲರಿಗೂ ಆತುರ ಸುರುವಾಯಿತು. ದೇವರ ಬಳಿಗೆ ಬರಿಕೈಯಲ್ಲಿ ಹೋಗುವುದೇ? ಹಣ್ಣು, ಕಾಯಿ ಊದುಬತ್ತಿ ತಂದರು. ಊದು ಕಡ್ಡಿಗಳನ್ನು ಹೊತ್ತಿಸಿ ಹೊಂಡದ ಮೇಲೆ ದೂರ ದಲ್ಲಿ ನಿಂತು ಆನೆಯ ಕಡೆಗೆ ಕೈ ಮುಂದುಮಾಡಿ ಮಂಗಳಾರತಿ ಮಾಡಿದರು. ಹಣ್ಣುಕಾಯಿಗಳನ್ನು ಕಾಲ ಬುಡಕ್ಕೆ ಎಸೆದು ಕೈಮುಗಿ ದರು. ನಿಂತಲ್ಲಿಯೇ ಅಡ್ಡಬಿದ್ದರು. ಕೆಲವರು ಹಣ್ಣಿನ ಗೊನೆಗಳನ್ನೇ ತಂದರು ಹಣ್ಣು ಇಲ್ಲದವರು ಕಾಯಿಗೊನೆಯನ್ನೇ ತಂದರು, ಕೆಲವರು ಭಕ್ತಿಯ ಪರಕಾಷ್ಠೆಯಲ್ಲಿ ಗೊನೆಬಿಟ್ಟ ಬಾಳೆಯನ್ನು ಬುಡದಿಂದಲೇ ಕಡಿದು ತಂದು ಪ್ರಯಾಸ ಪಟ್ಟು ಆನೆಯ ಕಡೆಗೆ ಎಸೆದು ಕೃತಾರ್ಥ ರಾದರು. ಜನರ ಗದ್ದಲ ಆನೆಯ ನೆಮ್ಮದಿಯನ್ನು ಕದಡಿರಬೇಕು. ಅದು ಸುತ್ತು ಸುತ್ತು ತಿರುಗುತ್ತಾ ಆಗಾಗ ಸೊಂಡಿಲನ್ನು ಮೇಲೆತ್ತಿ ಘೀಳಿಡುತ್ತಿತ್ತು. ಆಗ ಗಣಪತಿ ಆಶೀರ್ವಾದ ಮಾಡುತ್ತಿದ್ದಾನೆಂದು ಜನರು ಇನ್ನಷ್ಟು ಸಂತೋಷಪಟ್ಟರು.

ನಮ್ಮಮ್ಮನಿಗೂ ಪ್ರತ್ಯಕ್ಷಗಣಪತಿಗೆ ಪೂಜೆಸಲ್ಲಿಸುವ ಆಸೆಯಾಯಿತು. ಅಪ್ಪನನ್ನು ಒಪ್ಪಿಸಿ, ಅಜ್ಜಿಯನ್ನು ಕರೆದುಕೊಂಡು

ಹೊರಟೇ ಬಿಟ್ಟರು. ನಾನೂ ಹೋದೆ, ಅಮ್ಮ ತೆಂಗಿನ ಕಾಯಿಯನ್ನು ಆನೆಯ ಕಡೆಗೆ ಬೀಸಿ ಎಸೆದರು. ಅದು ಕಾಲಬುಡಕ್ಕೆ ಬೀಳುವ ಬದಲು ತಲೆಗೆ ಬಡಿದು ಬಿಟ್ಟಿತು. ಆನೆ ಭೀಕರವಾಗಿ ಘೀಳಿಟ್ಟಿತು. ಆ ಕೂಗಿಗೆ ಅಪ್ಪನನ್ನು ಬಿಟ್ಟು ನಮಗೆಲ್ಲ ವಿಪರೀತ ಹೆದರಿಕೆಯಾಗಿ ಬಂದದಾರಿಯಲ್ಲಿ ತಿರುಗಿ ಓಡತೊಡಗಿದೆವು. ಅಪ್ಪ ನಿಲ್ಲುವಂತೆ ಹೇಳುತ್ತಿದ್ದುದು ಕಿವಿಗೆ ಬೀಳಲಿಲ್ಲ. ದಾರಿ ಇಳಿಜಾರಾಗಿತ್ತು. ಗಡಿಬಿಡಿಯಲ್ಲಿ ಅಜ್ಜಿ ಕೆಳಗೆ ಬಿದ್ದು ಉರುಳತೊಡಗಿದರು. ಓಡಿ ಬಂದು ಅಪ್ಪ ಹಿಡಿದುಕೊಳ್ಳದಿದ್ದರೆ ಏನಾಗುತಿತ್ತೊ ಏನೊ?

ಆನೆಯ ಸುದ್ದಿ ಅರಣ್ಯ ಇಲಾಖೆಗೆ ಮುಟ್ಟಿತು. ಅಧಿಕಾರಿಗಳು ಬಂದರು. ಬಗೆ ಬಗೆಯಾಗಿ ಪರೀಕ್ಷಿಸಿದರು. ಅದು ಸಾಮಾನ್ಯ ಕಾಡಾನೆಯೆಂಬುದನ್ನು ತಿಳಿದುಕೊಳ್ಳಲು ಹೆಚ್ಚು ಸಮಯ ಹಿಡಿಯಲಿಲ್ಲ. ಆದರೆ ಆ ತಗ್ಗುಪ್ರದೇಶದೊಳಗೆ ಹೇಗೆ ಬಂಧಿತ್ತೆಂದು ಅವರಿಗೂ ಹೊಳೆಯಲಿಲ್ಲ. ಗ್ರಾಮಸ್ತರಿಗೆ ನಿಜ ಸಂಗತಿಯನ್ನು ತಿಳಿಸುವ ಪ್ರಯತ್ನ ಮಾಡಿದರು. ಮರುದಿನವೇ ಅದನ್ನು ಕಾಡಿಗೆ ಕಳುಹಿಸುವುದಾಗಿ ಹೇಳಿ ಹೋದರು.

ಮರುದಿನ ಅಧಿಕಾರಿಗಳು ಬಂದರು. ಎರಡು ಪಳಗಿಸಿದ ದೊಡ್ಡ ಆನೆಗಳನ್ನು ತಂದಿದ್ದರು. ಅಧಿಕಾರಿಗಳ ಆದೇಶದಂತೆ ಮಾಹುತರು ಪಳಗಿದ ಆನೆಗಳನ್ನು ನಿಧಾನವಾಗಿ ಜಾಣತನದಿಂದ ತಗ್ಗಿನೊಳಗೆ ತೆಗೆದುಕೊಂಡು ಹೋದರು. ಕಾಡಾನೆ ತೀವ್ರವಾಗಿ ಪ್ರತಿಭಟಿಸಿತು. ಆದರೆ ಪಳಗಿದ ಎರಡು ಬಲಿಷ್ಠ ಆನೆಗಳ ಎದುರು ಅದರ ಆಟ ನಡೆಯಲಿಲ್ಲ. ಹತ್ತಿರದಿಂದ ಪರೀಕ್ಷಿಸಿದಾಗ ಯಾರೋ ದುರಾತ್ಮರು ಹೊಡೆದ ಗುಂಡುಗಳಿಂದ ಅದಕ್ಕೆ ತೀವ್ರ ಗಾಯಗಳಾಗಿದ್ದುದು ಕಂಡು ಬಂತು. ಬಲಗಣ್ಣು ಇಂಗಿ ಹೋಗಿ ಕುರುಡಾಗಿತ್ತು. ಇನ್ನೊಂದು ಗುಂಡಿನ ಗಾಯ ಉಲ್ಬಣಿಸಿ ಕೀವು ರಕ್ತ ಸೋರುತ್ತಿತ್ತು. ಅದರ ದೇಹ ತುಂಬಾ ಕೃಷವಾಗಿ ಎಲುಬಿನ ಗೂಡೇ ಆಗಿತ್ತು. ಹೇಗೋ ಏನೋ ಆ ತಗ್ಗಿನೊಳಗೆ ಬಂದಮೇಲೆ ಅದಕ್ಕೆ ಮೇಲಕ್ಕೆ ಹೋಗಲು ಸಾಧ್ಯವಾಗದೆ ಅಲ್ಲೆ ಉಳಿದಿತ್ತು.

ಹೇಗಾದರು ತಗ್ಗಿನಿಂದ ಮೇಲಕ್ಕೆ ತರುವಂತೆ ಅಧಿಕಾರಿಗಳು ಮಾಹುತರಿಗೆ ಸೂಚಿಸಿದರು. ಬಾರೀ ಸಂಖೆಯಲ್ಲಿ ಸೇರಿದ್ದ ಗ್ರಾಮಸ್ತರಿಂದ ಕೆಲಸಕ್ಕೆ ಅಡಚಣೆಯಾಗುತ್ತಿತ್ತು. ಮಾಹುತನ ಆದೇಶದಂತೆ ಒಂದು ಆನೆ ಆ ಕಾಡಾನೆಯ ಸೊಂಡಿಲನ್ನು ತನ್ನ ಸೊಂಡಿಲಿನಿಂದ ಹಿಡಿದು ಮೇಲಕ್ಕೆ ಮೆಲ್ಲನೆ ಎಳೆಯುತ್ತಿತ್ತು. ಇನ್ನೊಂದು ಹಿಂದಿನಿಂದ ತುಳ್ಳುತ್ತಿತ್ತು. ಅದು ನೋವಿನಿಂದ ಘೀಳಿಡುತ್ತಿತ್ತು. ಸ್ವಲ್ಪ ಹೊತ್ತಿನಲ್ಲಿ ಅದು ತನ್ನ ಮೊಣಕಾಲುಗಳ ಮೇಲೆ ಕುಸಿಯಿತು. ಎಷ್ಟೇ ಪ್ರಯತ್ನಿಸಿದರೂ ಮೇಲೇಳದೆ ಅಲ್ಲಿಯೇ ಪ್ರಾಣಬಿಟ್ಟಿತು. ಅದು ಒಂದು ಹೆಣ್ಣಾನೆ.

ದುಷ್ಟರ ಗುಂಡಿಗೆ ಬಲಿಯಾಗಿ ನರಳಿ ನರಳಿ ಸತ್ತ ಆ ಹೆಣ್ಣಾನೆಯನ್ನು ಕಂಡು, ಹೆಣ್ಣಾದ ನನ್ನ ಕಣ್ಣಿನಲ್ಲೂ ನೀರುಕ್ಕಿ ಬಂದಿತು. ಸೆರಗಿನಿಂದ ಒರೆಸಿಕೊಂಡು ಮನೆಗೆ ಮರಳಿದೆ.

---

## ಸಾವು

ರೋಗಕ್ಕೆ ವ್ಯತ್ಯಾಸ ಇಲ್ಲ; ಅದರ ನಿವಾರಣೆಗೂ ವ್ಯತ್ಯಾಸ ವಿಲ್ಲ ಸಾವಿಗೂ ವ್ಯತ್ಯಾಸವಿಲ್ಲ. ಹುಟ್ಟಿನ ಜತೆಯಲ್ಲಿ ಬರುವುದೇ ಸಾವು. ಹುಟ್ಟುವುದೇ ಸಾಯಲಿಕ್ಕಾಗಿ, ಸಾವು ಒಳ್ಳೆಯದೂ ಅಲ್ಲ, ಕೆಟ್ಟದ್ದೂ ಅಲ್ಲ. ಅದು ಸೃಷ್ಠಿಯ ನಿಯಮ. ಹುಟ್ಟು ಸಾವು ಇಲ್ಲದಿದ್ದರೆ ದೇವರಿಗೇನು ಕೆಲಸ?

ಸಾಮಾನ್ಯವಾಗಿ ಸಾವು ಮನೆಯಲ್ಲಿ ಅಳುವುದು ವಾಡಿಕೆ. ಈ ಅಳುವು ಏಕೆ? ಸಾವಿಗಾಗಿ ನಾವು ಅಳುತ್ತೇವೋ; ಅಲ್ಲ ಸತ್ತ ವ್ಯಕ್ತಿಯಿಂದ ನಮಗಾಗುವ ಪ್ರಯೋಜನ ಇಲ್ಲವಾಯಿತೆಂದು ಅಳುತ್ತೇವೋ, ವ್ಯಕ್ತಿಯ ರೂಪ ಇನ್ನಿಲ್ಲದಾಯಿತೆಂದು ಅಳುತ್ತೆವೋ ಗೊತ್ತಿಲ್ಲ. ತಾಯಿಯ ಸಾವಿನಲ್ಲಿ ಮಗಳು ಅಳುತ್ತಾಳೆ. ಅವಳೇ ತನ್ನ ಅತ್ತೆ ಸತ್ತರೆ ಅಳುತ್ತಾಳೆ. ಈ ಅಳುವಿನಲ್ಲಿ ಭಾವನೆ ಬೇರೆ ಬೇರೆ ಸತ್ತರೆ ಅಳುತ್ತೇವೆ. ನನ್ನ ತಂದೆ, ತಾಯಿ, ಗೃಹಲಕ್ಷ್ಮಿ ಸತ್ತರು. ದುಃಖಿಸಿ ಅತ್ತೆ ಮಾಡಿದ್ದೇನು. ಇವರು ಮೂವರಿಗೂ ಸ್ಮಶಾನದಲ್ಲಿ ದಯದಾಕ್ಷಿಣ್ಯವಿಲ್ಲದೆ ಅಗ್ನಿ ಸ್ಪರ್ಶಿಸಿ, ಸತ್ತವರ ಕುರುಹು ಇಲ್ಲದಾಗೆ ಮಾಡಿ ಇದ್ದ ಕುರುಹು (ಚಿತಾಭಸ್ಮ)ವನ್ನು ವಾಹಿನಿಯಲ್ಲಿ ತೇಲಿಸಿದೆ. ನಾವು ಮಾಡುವುದೇನು ಚಿಂತೆಯಲ್ಲಿ ಚಿತೆ ಇಡುತ್ತೇವೆ. ಮರಳಿ ಮನೆಗೆ ಬಂದು ಚಿಂತೆಯಲ್ಲಿ ಅವರು ಬಿಟ್ಟಿರಬಹುದಾದ, ಬ್ಯಾಂಕ್ ಬ್ಯಾಲೆನ್ಸ್, ಆಭರಣ, ಒಡವೆ ವಸ್ತುಗಳ ಹುಡುಕಾಟ ಇದರಲ್ಲಿ ನಿರತರಾಗುತ್ತೇವೆ. ಒಟ್ಟಿನಲ್ಲಿ ಮನೆಯ ಜ್ಯೋತಿಯನ್ನು ಕಳೆದು ಕೊಳ್ಳುತ್ತೇವೆ. ಪರಿಹಾರವನ್ನು ಹುಡುಕುತ್ತೇವೆ.

ಅದೇನೆ ಇರಲಿ ಸಾವು ನಮ್ಮ ಹಕ್ಕು, ಜನ್ಮಸಿದ್ಧ ಹಕ್ಕು. ವಿವಿಧ ರೀತಿಯ ಜನರಿಗೆ ವಿವಿಧ ನಿವಾರಣೆ ಸೂತ್ರ ಸಾವು ಕೊಡುತ್ತದೆ. ಕೆಲವರಿಗೆ ಸಾವು ಒಂದು ಕೊಡುಗೆ (gift) ಕೆಲವರಿಗೆ ಸಾವು ಒಂದು ಪರಿಹಾರ(Relief). ಕೆಲವರಿಗೆ ಸಾವು ಒಂದು ಆಶ್ರಯ (refuge) ಕೆಲವರಿಗೆ ಸಾವು ಒಂದು ಪಾಠ (lesson), ಕೆಲವರಿಗೆ ಸಾವು ಒಂದು ಅದರುವಿಕೆ (Jolt) ಕೆಲವರಿಗೆ ಸಾವು ಒಂದು ಮೈಲಿಗಲ್ಲು (Mile-Stone) ಕೆಲವರಿಗೆ ಸಾವು ಒಂದು ಶಿಕ್ಷೆ. (Punishment) ಕೆಲವೇ ಕೆಲವರಿಗೆ ಸಾವು ಒಂದು ಸ್ವರ್ಗ (Paradise) ಸಾವು ಯಾರನ್ನೂ ಬಿಟ್ಟಿಲ್ಲ ಬಿಡುವುದಿಲ್ಲ. ಜೀವನ ದಲ್ಲಿ ಸೋತವರು, ಹಿಂಸೆಗೊಳಗಾದವರು, ಮೂರ್ಖರು, ಭೋಗಲಾಲಸಿಗಳು, ಯಾತ್ರಾರ್ತಿಗಳು, ಹೇಡಿಗಳು, ಸ್ವಾಮಿನಿಷ್ಠೆ ಉಳ್ಳವರು ಎಲ್ಲರೂ ಸಾಯಲೇ ಬೇಕು. ಒಬ್ಬೊಬ್ಬರಿಗೆ ಒಂದೊಂದು ವಿಧದ ಪರಿಹಾರವೇ ಸಾವು.

ಸಾವಿಗೆ ಹೆದರಬಾರದು ಅದನ್ನು ಧೈರ್ಯದಿಂದ, ಸ್ವಾಗತಿಸಿ, ಸ್ವೀಕರಿಸಬೇಕು. ಸತ್ತವರ ಕ್ಷೇಮಕ್ಕಾಗಿ ನಾವು ಬದುಕಬೇಕು. ಸಂತೋಷಕ್ಕೆ ಎಲ್ಲರೂ ಇರುವರು ದುಃಖಕ್ಕೆ ಯಾರೂ ಇಲ್ಲ. ನಮಗೆ ನಾವೇ ಸಂತೈಸುವುದೊಂದು ತೋರಿಕೆ. ನಮ್ಮನ್ನು ನಾವು ಸಂತೈಸಿ ಕೊಳ್ಳಬೇಕು. ಧೈರ್ಯದಿಂದ ಮುಂದಿನ ಬಾಳಿಗೆ ಹೆಜ್ಜೆ ಹಾಕಬೇಕು. ಹುಟ್ಟು ಸಾವು ಎರಡೂ ಸರಿಸಮಾನ.

ಸಾವಿಗೆ ಏಕೆ ಹೆದರಬೇಕು? ಸ್ವಾಗತಿಸಿ.

**ಚೇಂದ್ರಿಮಾಡ ಗ. ಮುತ್ತಪ್ಪ. ಕುಶಾಲನಗರ.**

---

**ಊಟಕೆ ಮುಂದೆ, ಮೀಯ್ಯಕ್ಕೆ ಹಿಂದೆ**




✦ ಕೌಂಡಿನ್ಯ : ಧಾರವಾಹಿ -33

ಅದು ಎಡತೊರೆಯ ಬಂಗಲೆ!

ಪ್ರಸನ್ನ ಅವಳನ್ನು ಹೆದರಿಸಿದ್ದನು, ಅದನ್ನು ನೆನಪು ಮಾಡಿಕೊಂಡು ರೇವತಿ ಭಯಪಡುತ್ತಿದ್ದಾಳೆ.

ಇನ್ನು........ಇನ್ನು ನಾನು ಇಲ್ಲಿ ಇರಬಾರದು! ಆದರೆ ಪೋಲಿಸ್ ಅಧಿಕಾರಿ ಅವಳ ಜೊತೆ ಮಾತಾಡಲು ಬರುತ್ತೇನೆ ಎಂದಿದ್ದರಿಂದ ಅವನಿಗಾಗಿ ಕಾಯಲೇ ಬೇಕು! ಪೋಲಿಸ್ ಸ್ಟೇಷನ್ನಿಗೆ ಹೋಗಲೆ ಎಂದು ಕೊಂಡಳು.

ಅಲ್ಲಿ ಎಸ್.ಐ. ಇರುವುದಿಲ್ಲ! ಪಕ್ಕದ ಹಳ್ಳಿಯಲ್ಲಿ ಗಲಾಟೆ ನಡೆಯುತ್ತಿರುವುದರಿಂದ ಅಲ್ಲಿಗೆ ಹೋಗಿದ್ದಾನೆ. ಅವನು ಬರುವ ತನಕ ಕಾಯಲೇ ಬೇಕು.

ರೂಮಿನಲ್ಲಿ ಇರಲು ಭಯ ವಾಯಿತು.

ಅವಳು ಈಗ ಅಲ್ಲಿಂದ ಎದ್ದು ಹೊರ ಬಂದಳು. ಪ್ರಸನ್ನ ವೀರಭದ್ರನ ರೂಮಿನ ಹತ್ತಿರ ಇಬ್ಬರು ಕೆಲಸಗಾರರು ರಕ್ಷಣೆಗಾಗಿ ನಿಂತುಕೊಂಡಿದ್ದರು.

ರೇವತಿ ಹೊರಗೆ ಬಂದಳು.

ಬಂಗಲೆಯ ಕಾಂಪೌಂಡಿನಲ್ಲಿ ಇದ್ದ ಹೂವಿನ ಗಿಡಗಳ ನಡುವೆ ನಿಂತುಕೊಂಡು ಆನಂದಿಸುತ್ತಿದ್ದಾಳೆ.

ಹೂವುಗಳ ಸೌಂದರ್ಯ!

ಆಗ... ಮೆಲ್ಲಗೆ... ತುಂಬಾ ಮೆಲ್ಲಗೆ "ರೇವತಿ ರೇವತಿ" ಎಂದು ಕೂಗಿದಂತೆ ಕೇಳಿಸಿತು ಅವಳಿಗೆ!

ರೇವತಿ ಬೆಚ್ಚಿ ಬಿದ್ದು ಹಿಂತಿರುಗಿದಳು

ಹೂವಿನ ಗಿಡಗಳು ಅಲ್ಲಾಡುತ್ತಿದೆ!

ರೇವತಿಗೆ ಭಯದೊಂದಿಗೆ ಸಂದೇಹ ಸಹ ಬಂದಿತು. ಅಲ್ಲಿ.... ಅಲ್ಲಿ ಯಾರೋ ಇರಲೇ ಬೇಕು!

ರೇವತಿ ಹಿಂದೆ ಸರಿದಳು.

ಹಿಂದಿನಿಂದ ಕೇಳಿಸಿತು ಹೆಜ್ಜೆ ಶಬ್ದ!

ರೇವತಿ ಬೆಚ್ಚಿ ಬಿದ್ದು ಸರ್ರನೆ ಹಿಂತಿರುಗಿದಳು. ಆದರೆ ಅಪಾಯ ಸಿಡಿಲಿನಂತೆ ಎರಗಿತ್ತು.

ಕಂಬಳಿಯನ್ನು ಸುತ್ತಿದ್ದ ವ್ಯಕ್ತಿ!

ಬಲವಾದ ದೊಣ್ಣೆಯ ಪ್ರಹಾರ!

ರೇವತಿ ಕಿಟಾರನೆ ಕಿರುಚುತ್ತಾ ಎರಡು ಹೆಜ್ಜೆ ಹಿಂದೆ ಸರಿದಿದ್ದರಿಂದ ನಡುನೆತ್ತಿಯ ಭಾಗಕ್ಕೆ ಬೀಳಬೇಕಾಗಿದ್ದ ಏಟು ತಪ್ಪಿತು! ತಲೆಯ ಹಿಂಭಾಗಕ್ಕೆ ಬಡಿದಿತ್ತು!

ಪ್ರಾಣಾಂತಿಕ ಕೂಗು!

ಕೆಲಸದ ಆಳುಗಳು ಓಡಿ ಬಂದರು.

ಮುಸುಕದಾರಿ ಕಾಂಪೌಂಡ್ ಹಾರಿದ್ದನು.

****

ಸಂಪಿಗೆ ಪುರದಿಂದ ಹತ್ತು ಮೈಲಿಗಳು ದೂರ ಇದ್ದ ಆಸ್ಪತ್ರೆಗೆ ರೇವತಿಯನ್ನು ಸೇರಿಸಲಾಗಿತ್ತು!

ಅವಳಿಗೆ ಪ್ರಾಣಾಪಾಯ ಉಂಟಾಗಿರಲಿಲ್ಲ. ಆದರೆ ದೊಣ್ಣೆಯ ಹೊಡೆತ ಬಲವಾಗಿ ಬಿದ್ದಿತ್ತು!

ಶ್ರೀಕಂಠ, ಅಜ್ಜಿ, ಪೂಜಾರಿ ಆಸ್ಪತ್ರೆಗೆ ಬಂದರು. ಪ್ರಸನ್ನ ಸಹ ಅಲ್ಲಿಯೇ ಇದ್ದನು.

ಪೋಲಿಸ್ ಜೀಪ್ ಬಂದಿತು.

ರೇವತಿಗೆ ಟ್ರೀಟ್ ಮೆಂಟ್ ನೀಡಿ ವಾರ್ಡಿಗೆ ಕರೆದು ಕೊಂಡು ಬರಲಾಯಿತು. ಅವಳಿಗೆ ಪ್ರಜ್ಞೆ ಇರಲಿಲ್ಲ.

ತಲೆಗೆ ಬ್ಯಾಂಡೇಜ್ ಹಾಕಲಾಗಿತ್ತು!

ಶ್ರೀಕಂಠ ಮತ್ತು ಪೂಜಾರಿ ದುಃಖ, ಬೇಸರದಿಂದ ರೇವತಿಯ ಕಡೆ ನೋಡುತ್ತಿದ್ದಾರೆ.

ಅಜ್ಜಿ ಮುಸಿ ಮುಸಿ ಅಳುತ್ತಿದೆ! ಯಾಕೆ ಅಂದರೆ ರೇವತಿ ಅಜ್ಜಿಯ ಮೊಮ್ಮಗಳ ಸ್ನೇಹಿತೆ. ನಾಲ್ಕು ದಿನಗಳು ಇವರ ಮನೆಯಲ್ಲಿ ಇದ್ದಳಲ್ಲ!

ಪ್ರಸನ್ನ ಭಯಗೊಂಡಿದ್ದಾನೆ. ಹನಿ ತುಂಬಿದ ಕಣ್ಣುಗಳಿಂದ ರೇವತಿಯನ್ನು ನೋಡುತ್ತಿದ್ದಾನೆ.

ಇವನು ಪ್ರೀತಿಸಿ, ಬಯಸಿರುವ ಹೆಣ್ಣು ರೇವತಿ!

ಹೃದಯ ಹಿಂಡಿದಂತೆ ಆಗುತ್ತಿದೆ.

ಪೋಲಿಸ್ ಅಧಿಕಾರಿಗೆ ರೇವತಿಯಿಂದ ಹೇಳಿಕೆಯನ್ನು ಪಡೆಯಲು ಆಗಲೇ ಇಲ್ಲ!

ಯಾಕೆ ಅಂದರೆ ಅವಳಿಗೆ ಪ್ರಜ್ಞೆ ಬಂದಿರಲಿಲ್ಲ. ಅವಳ ರಕ್ಷಣೆಗೆ ಸೂಕ್ತ ವ್ಯವಸ್ಥೆ ಮಾಡಲಾಯಿತು!

ಇಬ್ಬರು ಪೀಸಿಗಳಿದ್ದಾರೆ!

ಅಜ್ಜಿ, ಶ್ರೀಕಂಠ, ಪೂಜಾರಿ ರೇವತಿಗೆ ಪ್ರಜ್ಞೆ ಬಂದ ಕೂಡಲೇ ಮಾತಾಡಿಸಬೇಕು ಅಂತ ವಾರ್ಡಿನ ಹೊರಗೆ ಕಾಯುತ್ತಿದ್ದಾರೆ.

****

ಎಡತೊರೆ ಬಂಗಲೆಯಲ್ಲಿ!

ಪ್ರಸನ್ನ ಮನೆಗೆ ಹಿಂತಿರುಗಿದ್ದನು. ಅವನಿಗೆ ಈಗ ಬೇಕಾದಷ್ಟು ಐಶ್ವರ್ಯ ಇದೆ! ಆದರೆ ಸುಖ ನೆಮ್ಮದಿ ಇಲ್ಲ!

ಪ್ರತಿ ಕ್ಷಣವೂ ಆತಂಕ! ರೇವತಿಗೆ ಪ್ರಜ್ಞೆ ಬಂದಿತ್ತು. ಆದರೆ ಅದೇಕೋ ಇವನನ್ನು ಕೆಂಗಣ್ಣಿನಿಂದ ನೋಡಿ ಮುಖ ತಿರುಗಿಸಿದಳು.

20ನೇ ಪುಟಕ್ಕೆ

ಇಲ್ಲಿಯವರೆಗೆ.........

ಲಿಂಗಯ್ಯನ ಸಾವಿನ ನಂತರ ಪ್ರಸನ್ನ ಉಳಿದಿರುವ ತನ್ನ ಅಣ್ಣ ವೀರಭದ್ರನಿಗೆ ರಕ್ಷಣೆಯ ಏರ್ಪಾಡನ್ನು ಮಾಡುತ್ತಾನೆ. ಪ್ರಸನ್ನನಿಗೆ ರೇವತಿಯ ಮೇಲೆ ಕೋಪ, ಪೋಲಿಸರಿಗೆ ಏನನ್ನು ಸಹ ಹೇಳಬಾರದೆಂದು ಎಚ್ಚರಿಸುತ್ತಾನೆ.

ಮುಂದೆ ಓದಿ.........

# ವಿದ್ಯಾವಂತ ನಿರುದ್ಯೋಗಿಗಳಿಗೆ ಮಾರ್ಗದರ್ಶಿ - 3

ತಡಿಯಪ್ಪನ ಕುಮಾರ ಜಯ

ಹಿಂದಿನ ಸಂಚಿಕೆಯಿಂದ ಮುಂದುವರೆದಿದೆ.

51 ಕೇಮ್ ಇಂಜಿನಿಯರಿಂಗ್ ಕಂ.,
ಮತ್ತು ಪ್ರಿಸಿಶನ್ ಟೂಲ್ಸ್ 01
1ನೇ ಸ್ಟೇಜ್ ಯಾದವಗಿರಿ ಐ.ಎ., ಮೈಸೂರು -20

52 ಡೈಮಂಡ್ ಡೈಸ್ 1ನೇ ಸ್ಟೇಜ್ ಫಿಟರ್ 01
ಯಾದವಗಿರಿ ಐ.ಇ. ಮೈಸೂರು -20.

53 ಓಮರ್ ತಾಜ್ ಕಮರ್ಷಿಯಲ್ ಕಾರ್ ಮೆಕಾನಿಸ್ಟ್ 01
ಯಾದವಗಿರಿ ಐ.ಇ. ಮೈಸೂರು - 20.

54 ಶಿವಾನಂದ ಇಂಜಿನ್ ವರ್ಕ್ಸ್,
ಶೆಡಂ ನಂ. 101 ಟರ್ನರ್ 01
102 ಐ.ಇ. ಯಾದವಗಿರಿ ಐ.ಇ. ಮೈಸೂರು -20

55 ಸಿ.ಎಸ್. ಇಂಡಸ್ಟ್ರೀಸ್ ಪ್ರೈ.ಲಿ., ಮೆಕಾನಿಕ್ 01
ಸಿ -96ಐ.ಇ. ಯಾದವಗಿರಿ, ಮೈಸೂರು -20

56 ವಿ.ಸಿ.ಟಿ. ಲ್ಯಾಬ್ಸ್ ಶೆಡ್ ನಂ.
ಸಿ 100 ಐ.ಇ ಎಲೆಕ್ಟ್ರಾನಿಕ್ ಮೆಕಾನಿಕ್ 04
ಯಾದವಗಿರಿ, ಮೈಸೂರು -20.

57 ಮೈಸೂರು ಇಂಡಸ್ಟ್ರಿಯಲ್ ಡೈಮಂಡ್ ಟೂಲ್ಸ್
ಶೆಡ್ ನಂ. ಸಿ - 93, ಐ.ಇ. ಯಾದವಗಿರಿ,
ಮೈಸೂರು -20. ಟರ್ನರ್ 01

58 ಎಂ.ಆರ್. ಇಂಜಿನಿಯರಿಂಗ್ ವರ್ಕ್ಸ್, ಎಂ. 8
ಯಾದವಗಿರಿ ಐ.ಇ. ಮೈಸೂರು ಟರ್ನರ್ 01

59 ಆಟೋ ಕ್ಯಾಂಪ್ ಇಂಜಿನಿಯರಿಂಗ್ ಟರ್ನರ್ 2
ಸಿ-141ಐ.ಇ. ಯಾದವಗಿರಿ, ಮೈಸೂರು -20

60 ಕೋಮ್‌ಪೆಕ್ ಸಿಸ್ಟಂ ಸಿ. 175 ಎಲೆಕ್ಟ್ರಾನಿಕ್ ಮೆಕಾನಿಕ್ 10
ಯಾದವಗಿರಿ, ಮೈಸೂರು -20

61 ವಿಪ್ರೋ ಲಿ., ಇಂಡಸ್ಟ್ರಿಯಲ್ ಎಸ್ಟೇಟ್
ಮೇಟಗಳ್ಳಿ, ಮೈಸೂರು -16 ಎಲೆಕ್ಟ್ರಾನಿಕ್ ಮೆಕಾನಿಕ್ 10

62 ಕೋಹಿನಾರ್ ಇಂಡಸ್ಟ್ರೀಸ್ 1 ನೇ ಸ್ಟೇಜ್, ವೆಲ್ಡರ್ 1
ಯಾದವಗಿರಿ ಪಿ. ಇ., ಮೈಸೂರು -20

63 ವಾಸವಿ ಸಾಫ್ಟ್‌ಡ್ರಿಂಕ್(ಪಿ)ಲಿ., M.R.A.C 1
ಕೆ.ಆರ್. ಎಸ್. ರಸ್ತೆ, ಮೈಸೂರು - 16
ಬಾಯ್ಲರ್ ಅಟೆಂಡೆಂಟ್ 1

64 ಸಂಗಂ ಮೆಕಾನಿಕ್ ಇಂಜಿನಿಯರಿಂಗ್ ವರ್ಕ್ಸ್ ವೆಲ್ಡರ್ 1
ಬೆಳಗೊಳ, ಐ. ಎ., ಮೈಸೂರು -20

65 ಹಿಂದೂಸ್ಥಾನ್ ಲೀವರ್ ಲಿ., ಎಲೆಕ್ಟ್ರಿಷಿಯನ್ 1
ಪಿ.ನಂ. 424, ಹೆಬ್ಬಾಳ್ ಐ.ಎ.
ಮೈಸೂರು ಬಾಯ್ಲರ್ ಅಟೆಂಡೆಂಟ್ 1

66 ಡನ್‌ಪೋರ್ಡ್ ಫ್ಯಾಬ್ರಿಸ್ ಎಲೆಕ್ಟ್ರಿಷಿಯನ್ 1
ಬಸವನಪುರ, ನಂಜನಗೂಡು ತಾ.

67 ರಾಜಮ್ಮ ಮೆಟಲ್ ರೋಲಿಂಗ್ ವರ್ಕ್ಸ್
ಸಿ. 128, ಯಾದವಗಿರಿ ಐ.ಇ., ಮೈಸೂರು
M.W. ರೋಲಿಂಗ್ ಮಿಲ್ 1

68 ವಿಮೇರ್ ಇಂಡಸ್ಟ್ರೀಸ್ 2ನೇ ಹಂತ, ವೆಲ್ಡರ್ 1
ಎಸ್. ನಂ. ಡಿ. 157 ಮತ್ತು 174 S.M.W. 1

69 ಕೋಟಾರಿ ಮೋಟಾರ್ ಮತ್ತು ಜನರಲ್ ಫೈನಾನ್ಸ್
2256/ಎ, ವಿನೋಬ ರಸ್ತೆ, ಮೈಸೂರು -5
ಮಚ್ ಮೋಟರ್ ವೆಹಿಕಲ್ 1

70 ಸಿಗ್ಮ ಕಂಟೋಲ್ಸ್ ನಂ. ಡಿ 88 ಐ.ಇ ಎಲೆಕ್ಟ್ರಿಕ್ ಮೆಕಾನಿಕ್ 1
ಯಾದವಗಿರಿ, ಮೈಸೂರು -20

71 ಫಾಮ್ಸ್ ಇಂಜಿನಿ. ಸಿ 113-114ಐ.ಇ. ಟರ್ನರ್ 2
ಯಾದವಗಿರಿ, ಮೈಸೂರು -20

72 ವಿನೋದ್ ಪ್ರಿಂಟರ್ಸ್, ಎಸ್. ನಂ. 117 ಬುಕ್ ಬೈಂಡರ್ 1
ಯಾದವಗಿರಿ ಐ.ಇ., ಮೈಸೂರು -20

73 ಭಾರತ್ ಪ್ರಿಸಿಷನ್ ಇಂಜಿನಿಯರಿಂಗ್ ವರ್ಕ್ಸ್ ಫಿಟರ್ 1
ಯಾದವಗಿರಿ ಐ.ಇ., ಮೈಸೂರು -20

74 ಆಫ್ಲಾ ಕಂಟ್ರೋಲ್ಸ್, ಡೋರ್ ನಂ. 88ಎ. ಐ.ಇ
ಯಾದವಗಿರಿ, ಮೈಸೂರು -20

75 ಎಲೆಕ್ಟ್ರಾನಿಕ್ ಹೌಸಿಂಗ್ ಕಾಂಪೆಂಟ್ಸ್
ನಂ. ಡಿ. 81ಸಿ-76, ಯಾದವಗಿರಿ, ಪ್ಲಾಸ್ಟಿಕ್ ಮೌಲ್ಡ್ ಮೇಕರ್
ಮೈಸೂರು -20 ಟಿ ಮತ್ತು ಡಿ ಮೇಕರ್

76 ಸದರನ್ ಸ್ಟೇಟ್ ಎಲಕ್ಟ್ರಿಕ್ ಕಂ. ಎಲೆಕ್ಟ್ರಿಕ್ ಪ್ಲೇಟರ್ 1
ಸೀರಿಯಲ್ ನಂ. 110-ಸಿ ಯಾದವಗಿರಿ, ಮೈಸರು

77 ಕ್ವಾಲಿಟಿ ಮೆಕಾನಿಕ್ ಟೂಲ್ಸ್, ಸಿಟಿ ನಂ. 32ಎ
ಐ.ಎಸ್. ಮೈಸೂರು -8 ಟರ್ನರ್ 2

78 ಮೈಸೂರು ಆಟೋ ಏಜನ್ಸಿಸ್, ನಂ. 38/2 ಮಕ. ಡಿಸಲ್ 2
ಜೆ.ಎಲ್.ಬಿ. ರಸ್ತೆ, ಮೈಸೂರು -24 M.M. W 2

79 ಎಲ್.ಜಿ. ಬಾಲಕೃಷ್ಣನ್ ಮತ್ತು ಬ್ರಾಸ್ ಲಿ.
ಎಸ್. ಎಂ. ವರ್ಕರ್ 2
3ನೇ ಹಂತ, ಮೈಸೂರು -18 ಇನ್ ಮೆಕಾನಿಕ್ 1

80 ಎಕ್ಸಲ್ ಪರ್ ಎಲೆಕ್ಟ್ರಾನಿಕ್ ಎಲೆಕ್ಟ್ರಾನಿಕ್ ಮೆಕಾನಿಕ್ 1
ಯಾದವಗಿರಿ ಹಂತ, ಮೈಸೂರು -8

81 ಎಲೆಕ್ಟ್ರಾನಿಕ್ ಪ್ರಾಡಕ್ಸ್ ಸಿ-74 ಆರ್ಮೆಚರ್ ವೈಂಡರ್ 1
ಯಾದವಗಿರಿ ಐ.ಇ. ಮೈಸೂರು-20

82 ಫೆರೋ ಪೌಂಡರ್ಸ್ ಪ್ರೈಲಿ., ಫಿಟ್ಟರ್ 4
ಮೈಸೂರು -86 ಟರ್ನರ್ 1
ಮೆಕಾನಿಸ್ಟ್ 1
ವೆಲ್ಡರ್ 3

83 ಶಿವಮೊಗ್ಗ ಕಾಸ್ಟಿಂಗ್ ಪ್ರೈ.ಲಿ. ಮೌಲ್ಡರ್ 1
(ಫೌಂಡ್ರಿ ಡಿವಿಜನ್)ಪಿ.ನಂ. 279 ಪಾಟ್ ಮೇಕರ್ 1
ಹೆಬ್ಬಾಳ್ ಐ.ಇ. ಯಾದವಗಿರಿ, ಮೈಸೂರು -16

84 ಮೈಸೂರು ಪ್ರಿಸಿಷಿಯನ್ ಇಂಜಿನಿಯರ್ ವರ್ಕ್ಸ್ ಟರ್ನರ್ 1
ನಂ. 123-126, ಐ.ಇ. ಯಾದವಗಿರಿ, ಫಿಟ್ಟರ್ 2
ಮೈಸೂರು -10

85 ಸ್ಟ್ಯಾಂಡರ್ಡ್ ಮೋಟಾರ್ ವರ್ಕ್ಸ್ ಎಂ.ಎಂ.ವಿ
ದಿವಾನ್ಸ್ ರಸ್ತೆ, ಬೆಳವಾಡಿ ಐ.ಎ. ಮೈಸೂರು-1 20ನೇ ಪುಟಕ್ಕೆ

**ಗಂಡ್ ದಂಡಿಲಿ ಸಾಯಕು, ಹೆಣ್ಣ್ ಹೆತ್ತ್ ಸಾಯಕು**

# ಗೌಡ ಸಮಾಜ - ಮರಗೋಡು

## ಕಟ್ಟಡ ನಿರ್ಮಾಣಕ್ಕೆ ಧನ ಸಹಾಯ ಮಾಡಿದ ಕೊಡುಗೈ ದಾನಿಗಳ ಹೆಸರು

| | ಹೆಸರು ಮತ್ತು ವಿಳಾಸ | ನೀಡಿದ ಮೊಬಲಗು | |
|---|---|---|---|
| (1) | ಶ್ರೀಮತಿ ಮತ್ತು ಶ್ರೀ ಕಟ್ಟೆಮನೆ ಪ್ರೇಮಾ, ಗಣೇಶ್ | ರೂ. | 25,000.00 |
| (2) | ಶ್ರೀ ಮತ್ತು ಶ್ರೀಮತಿ ಚೆರಿಯಮನೆ ಕೆ. ಶಶಿಧರ | ರೂ. | 25,000-00 |
| (3) | ಶ್ರೀ ಕಾಂಗೀರ ಕೆ. ನಂಜುಂಡ | ರೂ. | 15,500-00 |
| (4) | ಶ್ರೀ ಮತ್ತು ಶ್ರೀಮತಿ ಕಟ್ಟೆಮನೆ ಸಿದ್ಧಾರ್ಥ | ರೂ. | 15,000-00 |
| (5) | ಶ್ರೀ ಮತ್ತು ಶ್ರೀಮತಿ ಕಾನಡ್ಕ ಅಣ್ಣಯ್ಯ | ರೂ. | 12,215-00 |
| (6) | ಶ್ರೀ ಮತ್ತು ಶ್ರೀಮತಿ ಮಳ್ಳಂದೀರ ಲೂಸ್ಪಪತಿ | ರೂ. | 10,000-00 |
| (7) | ದಿವಂಗತ ಶ್ರೀಮತಿ ಬಿದ್ರುಪಡೆ ಬಿ. ಅಚ್ಚವ್ವ | ರೂ. | 10,000-00 |
| (8) | ಶ್ರೀ ಮತ್ತು ಶ್ರೀಮತಿ ಉಳುವಾರನ ಜಿ. ತಮ್ಮಯ್ಯ | ರೂ. | 8,001-00 |
| (9) | ಶ್ರೀ ಮತ್ತು ಶ್ರೀಮತಿ ಕೊಂಪುಳೀರ ಕೆ.ಆನಂದ | ರೂ. | 7001-00 |
| (10) | ಶ್ರೀ ಮತ್ತು ಶ್ರೀಮತಿ ಬಳಪದ ದೇಮಯ್ಯ | ರೂ. | 5,500-00 |
| (11) | ಶ್ರೀಮತಿ ಮಗೇರನ ಕೆ. ಸೀತಮ್ಮ | ರೂ. | 5,500-00 |
| (12) | ಶ್ರೀಮತಿ ಮತ್ತು ಶ್ರೀ ಐಯ್ಯಂಡ್ರ ರಾಮರಾಜು | ರೂ. | 5,005-00 |
| (13) | ಶ್ರೀ ಮತ್ತು ಶ್ರೀಮತಿ ಕರ್ಣಯ್ಯನ ಎ. ಲೋಹಿತಾಶ್ವ | ರೂ. | 5,001-00 |
| (14) | ಶ್ರೀ ಮತ್ತು ಶ್ರೀಮತಿ ಪೊನ್ನಚನ ಜಿ. ಸೋಮಣ್ಣ | ರೂ. | 5,001-00 |
| (15) | ಶ್ರೀಮತಿ ಮತ್ತು ಶ್ರೀ ಕೋಳಿಬೈಲು ಪಿ. ತಮ್ಮಯ್ಯ | ರೂ. | 5,001-00 |
| (16) | ಶ್ರೀಮತಿ ಮತ್ತು ಶ್ರೀ ಉಳುವಾರನ ಹೀರಾಲಾಲ್ | ರೂ. | 5,001-00 |
| (17) | ಶ್ರೀಮತಿ ಮತ್ತು ಶ್ರೀ ಐಯ್ಯಂಡ್ರ ಬಿ. ಮೋಹನ | ರೂ. | 5,000-00 |
| (18) | ಶ್ರೀಮತಿ ಮತ್ತು ಶ್ರೀ ಬಳಪದ ಮಂದಣ್ಣ | ರೂ. | 5,000-00 |
| (19) | ಶ್ರೀಮತಿ ಮತ್ತು ಶ್ರೀ ಕೊಂಪುಳೀರ ಕೇಶವ | ರೂ. | 5,000-00 |
| (20) | ಶ್ರೀಮತಿ ಮತ್ತು ಶ್ರೀ ಬೊಳ್ಳೂರುರಾಘವಯ್ಯ | ರೂ. | 5,000-00 |
| (21) | ಶ್ರೀಮತಿ ಮತ್ತು ಶ್ರೀ ಕೊಂಪುಳೀರ ಮುತ್ತಪ್ಪ | ರೂ. | 5,000-00 |
| (22) | ಶ್ರೀಮತಿ ಮತ್ತು ಶ್ರೀ ಪಾಂಡನ ಜಿ. ಮಂದಣ್ಣ | ರೂ. | 5,000-00 |
| (23) | ಶ್ರೀಮತಿ ಚೆರಿಯಮನೆ ಪೊನ್ನವ್ವ | ರೂ. | 5,000-00 |
| (24) | ಗೌಡ ಸಮಾಜ, ಮಡಿಕೇರಿ | ರೂ. | 5,000-00 |
| (25) | ಶ್ರೀಮತಿ ಕಟ್ಟೆಮನೆ ಎಸ್. ಬೊಜಮ್ಮ | ರೂ. | 4,000-00 |
| (26) | ದಿವಂಗತ ಶ್ರೀ ಕಾಂಗೀರ ಸುಬ್ಬಯ್ಯ | ರೂ. | 3,500-00 |
| (27) | ಶ್ರೀ ಮತ್ತು ಶ್ರೀಮತಿ ಚೆಟ್ಟೆಮಾಡ ಲೋಕನಾಥ | ರೂ. | 3,125-00 |
| (28) | ಶ್ರೀಮತಿ ಮತ್ತು ಶ್ರೀ ಅಪ್ಪಯಂಡ್ರ ಸೋಮಣ್ಣ | ರೂ. | 3,000-00 |
| (29) | ಶ್ರೀಮತಿ ಮತ್ತು ಶ್ರೀ ಮುಕ್ಕಾಟಿರ ಎಂ. ಬೆಳ್ಯಪ್ಪ | ರೂ. | 3,000-00 |
| (30) | ಶ್ರೀಮತಿ ಮತ್ತು ಶ್ರೀ ಮುಕ್ಕಾಟಿರ ಪಿ. ಬೆಳ್ಯಪ್ಪ | ರೂ. | 3,000-00 |
| (31) | ಪಾಂಡನ ಆರ್ ಪ್ರಕಾಶ | ರೂ. | 3,000-00 |
| (32) | ಶ್ರೀಮತಿ ಮತ್ತು ಶ್ರೀ ಪರ್ಚನ ಪಿ. ಪೂವಯ್ಯ | ರೂ. | 3,000-00 |
| (33) | ಶ್ರೀಮತಿ ಮತ್ತು ಶ್ರೀ ಕೊಂಪುಳೀರ ಪಿ. ಉಲ್ಲಾಸ | ರೂ. | 3,000-00 |
| (34) | ಶ್ರೀಮತಿ ಮತ್ತು ಶ್ರೀ ಕಟ್ಟೆಮನೆ ಎ. ಸೋಮಣ್ಣ | ರೂ. | 3,000-00 |
| (35) | ಶ್ರೀಮತಿ ಮತ್ತು ಶ್ರೀ ಪರ್ಲಕೋಟಿ ತಮ್ಮಯ್ಯ | ರೂ. | 3,000-00 |
| (36) | ಶ್ರೀಮತಿ ಮತ್ತು ಶ್ರೀ ಕೊಂಬಾರನ ಸೋಮಣ್ಣ ದೇವಕ್ಕಿ | ರೂ. | 3,000-00 |
| (37) | ಶ್ರೀಮತಿ ಮತ್ತು ಶ್ರೀ ಕರ್ಣಯ್ಯನ ಜಯನಂದ | ರೂ. | 2,000-00 |
| (38) | ಶ್ರೀಮತಿ ಮತ್ತು ಶ್ರೀ ಉಳುವಾರನ ಜಿ. ಶೇಷಗಿರಿ | ರೂ. | 2,000-00 |
| (39) | ಶ್ರೀಮತಿ ಮತ್ತು ಶ್ರೀ ಕೊಂಪುಳೀರ ಕೆ. ಪೊನ್ನಪ್ಪ | ರೂ. | 2,000-00 |
| (40) | ಶ್ರೀಮತಿ ಮತ್ತು ಬೊಳ್ಳೂರು ಮೀರಾಬಾಯಿ | ರೂ. | 2,000-00 |

## ಹಾಲು ಕೆಡದಂತೆ ಇಡಲು ಕೆಲವೊಂದು ಸಲಹೆಗಳು

1 ಬೆಳಗಿನ ಹಾಲು ರಾತ್ರಿಯ ತನಕ ಕೆಡದಂತೆ ಇರಬೇಕಾದರೆ ಹಾಲಿನಲ್ಲಿ ಹತ್ತು- ಹದಿನೈದು ಭತ್ತದ ಕಾಳುಗಳನ್ನು ತೊಳೆದು ಹಾಕಿಡಿ.

2 ಬೇಸಿಗೆ ಕಾಲದಲ್ಲಿ ಒಂದು ತಟ್ಟೆಯಲ್ಲಿ ನೀರು ಹಾಕಿ ಅದರಲ್ಲಿ ಹಾಲಿನ ಪಾತ್ರೆಯನ್ನು ಇಟ್ಟರೆ ಹಾಲು ಕೆಡುವುದಿಲ್ಲ.

3 ಹಾಲನ್ನು ಪಾತ್ರೆಗೆ ಹಾಕಿ ಕಾಯಿಸುವ ಮೊದಲು ಖಾಲಿ ಪಾತ್ರೆಯಲ್ಲಿ ನಾಲ್ಕು ಚಮಚ ನೀರು ಹಾಕಿ ಸ್ವಲ್ಪ ಹೊತ್ತು ಕುದಿಸಿರಿ, ಆ ಬಳಿಕ ಹಾಲು ಹಾಕಿದರೆ ಅದು ಅಡಿ ಹಿಡಿಯುವುದಿಲ್ಲ.

4 ಹಾಲು ಉಕ್ಕಿ ಚೆಲ್ಲುವಾಗ ಬೇಗ ಸ್ವಲ್ಪ ತಣ್ಣೀರು ಚಿಮುಕಿಸಿ ಉಕ್ಕಿ ಬಂದ ಕೆನೆ ಪಾತ್ರೆಯ ಒಳಗೆ ಹೋಗುತ್ತದೆ.

5 ಹಾಲು ಒಡೆದು ಹೋಗುವ ಅನುಮಾನವಿದ್ದರೆ ಕಾಯಿಸುವಾಗ ಪಾತ್ರೆಯೊಳಗೆ ಒಂದು ಸ್ಟೀಲಿನ ಚಮಚ ಹಾಕಿ, ಹಾಲು ಒಡಿಯಲಾರದು.

ಸಂಗ್ರಹ : ಅಚ್ಚಲ್ಪಾಡಿ ಬೀನ ಗೋಪಾಲ, ಮಡಿಕೇರಿ

---

## ಮದ್ವೆಗೆ

ಅದೊಂದು ಏಪ್ರಿಲ್ ತಿಂಗಳ ಶನಿವಾರ. ನಾನ್ ನನ್ನ ಅಕ್ಕನ ಮನೆಗೆ ಹಳ್ಳಿಂದ ಬೆಂಗ್ಳೂರಿಗೆ ಹೊರ್ಟಿದ್ದೆ. ಬಸ್ ತುಂಬಾ ರಸ್ ಬೇರೆ ಇತ್ತ್.

ಬಸ್‌ನ ಟೈಂ ಆಕಾಕನ ಬಸ್ ಹೊರ್‌ಟತ್ ಸ್ವಲ್ಪ ದೂರ ಹೋಕಾನ ಕಂಡೆಕ್ಟರ್ ಟಿಕೆಟ್ ಮಾಡಿಕಂಡೆ ನನ್ನ ಮುಂದಿನ ಸೀಟಿನವರೆಗೆ ಬಾತ್. ಒಂದ್ 65 ವರ್ಷ ಆಗಿರ್ದುಕಂಡೆ. ವಯಸ್ಸಾದ ಅಜ್ಜಿ ಕುದ್ದ್‌ಕಂಡ್ ಹೊರಗೆ ನೋಡ್ತಾ ಕುದ್ದಿತ್ತ್. ಕಂಡಕ್ಟರ್ ಬಂದ್ "ರೀ ಎಲ್ಲಿಗೆ" ಎಂದ್ " ಹೇಳಿ ಮಾಮೂಲಿ ಸ್ಟೈಲ್‌ಲಿ ಬಸ್‌ನ ರಾಡಿಗೆ ಹೊಡ್ದ್ ನಿತ್ತತ್. ಅಜ್ಜಿ ಇತ್ತ ತಿರ್‌ಗಿದ್ದೆ ಮದುವೆಗೇತ ಹೇಳ್ತ್. ಕಂಡಕ್ಟರ್ ಎಂತ ಮಾಡೋಕುತಾಗದೆ ಮದುವೆ ಎಲ್ಲೀತ ಕೇಳ್ರೆ ಜಾಗದ ಹೆಸ್ರು ಹೇಳ್ಬುತ ಮದುವೆ ಎಲ್ಲೀತ ಕೇಳ್ತ್. ಅಜ್ಜಿ ಒಮ್ಮೆಗೆ ಮಗಳ ಮನೆಲೀತ ಹೇಳೊಕ? ನಂಗೆ ನಗೆ ಬಂದ್ ಕಂಡಕ್ಟರ್‌ನ ಮುಖನೋಡ್ದೆ. ಅಂವ ಬೇರೆ ಎಂತ ಮಾಡ್ದು? ಮಗಳ ಎಲ್ಲಿಗೆ ಕೊಟ್ಟದ್‌ತ್ ಕೇಳ್ತ್. ಅಜ್ಜಿ ಒಮ್ಮೆಗೆ ಯಾವುದೊ ಮನೆ ಹೆಸ್ರ್ ಹೇಳ್ತ್. ಈಗ ಕಂಡೆಕ್ಟರ್ ಎಂತ ಮಾಡೋಕುತಾಗದೆ ಗ್ಯಾನಕೆ ಬಿತ್ತ್. ನಾನ್ ಮೆಲ್ಲ ಬಗ್ಗಿ ಅವ್ವ ನಿಮ್ಮ ಮಗ್ಳು ಯಾವ ಊರ್‌ಲಿ ಇರ್ದುತ ಕೇಳ್ದೆ. ಆಗ ಅದ್ ಮೈಸೂರುತ ಹೇಳ್ತ್. ಮತ್ತೆ ಕಂಡೆಕ್ಟರ್‌ಗೆ ನಾನ್ ಹೇಳಿ ಟಿಕೆಟ್ ಕೇಳಿ ತೆಗೆಸಿಕೊಟ್ಟೆ. ಈಗಲೂ ಅಕ್ಕನ ಮನೆಗೆ ಹೋಕಾಕನ ಆ ಅಜ್ಜಿನ ಗ್ಯಾನ ಆಗಿ ನೆಗೆ ಬಂದದೆ.

ಸುಜಾಮಧು, ಕುಂಬಳದಾಳು ಗ್ರಾಮ.

---

16ನೇ ಪುಟದಿಂದ

| | | | |
|---|---|---|---|
| (41) | ಶ್ರೀ ಮತ್ತು ಶ್ರೀಮತಿ ಬಾಳಕಜ್ಜೆ ವೆಂಕಪ್ಪ | ರೂ. | 1,300-00 |
| (42) | ಗೌಡ ಸಮಾಜ, ಕಾಟಕೇರಿ | ರೂ. | 1,010-00 |
| (43) | ಶ್ರೀ ಮತ್ತು ಶ್ರೀಮತಿ ಬೈಮನ ಮಾಚಯ್ಯ ಪೂವಮ್ಮ | ರೂ. | 1,001-00 |
| (44) | ಶ್ರೀ ಮತ್ತು ಶ್ರೀಮತಿ ಅಣ್ಣಾಚ್ಚೀರ ಎಂ. ವಿಠಲ | ರೂ. | 1,001-00 |
| (45) | ಶ್ರೀ ಮತ್ತು ಶ್ರೀಮತಿ ಮೂಲೆ ಮಜಲು ಚಿಣ್ಣಮ್ಮ ಉತ್ತಪ್ಪ | ರೂ. | 1,001-00 |
| (46) | ಶ್ರೀ ಮತ್ತು ಶ್ರೀಮತಿ ಪರಿಚನ ತಮ್ಮಯ್ಯ | ರೂ. | 1,000-00 |
| (47) | ಶ್ರೀಮತಿ ಮತ್ತು ಶ್ರೀ ಬೈಮನ ಆರ್ ಗಣಪತಿ | ರೂ. | 1,000-00 |
| (48) | ಶ್ರೀಮತಿ ಬೊಳ್ಳೂರು ಮಾಚಮ್ಮ | ರೂ. | 1,000-00 |
| (49) | ಶ್ರೀ ಮತ್ತು ಶ್ರೀಮತಿ ಕೋಳುಮಾಡನ ತಮ್ಮಯ್ಯ: | ರೂ. | 1,000-00 |
| (50) | ಶ್ರೀಮತಿ ಕಾನಡ್ಕ ಕೆ. ರುಕ್ಮಿಣಿ | ರೂ. | 500-00 |
| (51) | ಶ್ರೀ ಮತ್ತು ಶ್ರೀಮತಿ ಕೆದಂಬಾಡಿ ನಂದಕುಮಾರ್ ಬೇಬಿ | ರೂ. | 500-00 |

ಮೇಲೆ ನಮೂದಿಸಿರುವ ಧಾನಗಳಲ್ಲಿ ಯಾರದಾದರೂ ಹೆಸರು ಹಾಗೂ ಹಣ ಬಿಟ್ಟು ಹೋದ ಪಕ್ಷದಲ್ಲಿ ಸರಿಪಡಿಸಿಕೊಳ್ಳುವುದು. ಧಾನಿಗಳು ನೀಡಿರುವ ಮೊಬಲಗಿನಲ್ಲಿ ಯಾವುದೇ ವ್ಯತ್ಯಾಸವಿದ್ದಲ್ಲಿ ಲಿಖಿತ ಮೂಲಕ ತಿಳಿಯಪಡಿಸುವುದು.

---

## ನಿಧನ

ಕಲ್ಲುಮುಟ್ಲು ಅಪ್ಪಯ್ಯನವರು ದಿನಾಂಕ 12-5-2000 ರಲ್ಲಿ ಮಡಿಕೇರಿ ನಲ್ಲಿ ವೈಕುಂಠವಾಸಿಯಾದರು. ಇವರಿಗೆ 85ವರ್ಷ ಪ್ರಾಯವಾಗಿತ್ತು. ಇವರು 2ಗಂಡು 3ಹೆಂಣು ಮಕ್ಕಳನ್ನು ಹಾಗೂ ಅಪಾರ ಬಂದು ಮಿತ್ರರನ್ನು ಅಗಲಿದ್ದಾರೆ ಎಂದು ತಿಳಿದು ಬಂದಿದೆ.

---

ತಲೆ ಇದ್ದರೆ ಎಲೆ ಮಾರಿಯಾದರ್ ಬದ್ಕ್‌ತ್

17ನೇ ಪುಟದಿಂದ

86 ಆಟೋಮೆಷಿನ್ ಟೆಕ್ನಾಲಜಿಸ್, ನಂ. 69,
8ನೇ ಮೇನ್, 9ನೇ ಕ್ರಾಸ್, ಎಲೆಕ್ಟ್ರಾನಿಕ್ ಮೆಕಾನಿಕ್ 2
ಕುವೆಂಪುನಗರ, ಮೈಸೂರು-23

87 ಕೇಸರ್ ಎಲೆಕ್ಟ್ರಾನಿಕ್ ಮೋಟಾರ್ ರಿ. ವೈಡಿಂಗ್
ವರ್ಕ್ ಎದುರು, ನೂರ್ ಅಲಿಶ್ ಮೆಕೇನ್,
ಬಿ.ಎಸ್. ಸ್ಟ್ರೀಟ್, ಮೈಸೂರು -1 ವೈಂಡರ್(ಅರ್ಮೇಚರ್) 1

88 ನಿಸಾರ್ ಆಟೋ ಗ್ಯಾರೇಜ್ ಆಟೋ ಎಲೆಕ್ಟ್ರಿಷಿಯನ್ 1
ವೆಟರ್‌ನರಿ ಹಾಸ್ಪಿಟಲ್ ಹತ್ತಿರ, ದಿವಾನ್ಸ್ ರಸ್ತೆ
ಮೈಸೂರು -8 ಮೆಕ (ಡೀಸಲ್) 1

89 ಬೆಲ್ಸ್ ಕಂಟ್ರೋಲ್ಸ್ ನಂ. 123-27 ಎಲೆಕ್ಟ್ರಾನಿಕ್ ಮೆಕಾನಿಕ್ 4
ಐ. ಇ. ಮೇಟಗಳ್ಳಿ, ಮೈಸೂರು-1

90 ಕೋಹಿನೂರ್ ಆಯಿಲ್ ಮತ್ತು ಎಕ್ಸ್‌ಟ್ರಾಟರ್ ಲಿ.,
ಅಂಕನಹಳ್ಳಿ, ಬಿಳಿಕೆರೆ ಪೋಸ್ಟ್, ಬಾಯ್ಲರ್ ಅಟೆಂಡೆಂಟ್ 2
ಹುಣಸೂರು-ಮೈಸೂರು ರಸ್ತೆ, ಮೈಸೂರು.

91 ಮೈಸೂರು ಇಂಜಿನಿಯರಿಂಗ್ ವರ್ಕ್ಸ್ ಟರ್ನರ್ 1
ಸ್ವಾಡಿ ರಸ್ತೆ, ನೇ ಕ್ರಾಸ್‌ನ ಆಜಮ್ ಮಸೀದಿ, ಫಿಟ್ಟರ್
ಹಿಂಭಾಗ ಲಷ್ಕರ್ ಮೊಹಲ್ಲಾ, ಮೈಸೂರು-1

92 ಸುಜಯ ಇಂಡಸ್ಟ್ರೀಸ್, 37-ಬಿ ಬೆಳವಾಡಿ ಟರ್ನರ್ 1
ಐ.ಎ. ಮೈಸೂರು-86

93 ವಿಜಿಲ್ ಫಿಲಮೆಂಟ್ಸ್ ಪ್ರೈ. ಲಿ. ಬೆಳವಾಡಿ ಫಿಟರ್ 1
ಮೈಸೂರು-86

94 ಡೆಕೋರೇಟಿವ್ ಲ್ಯಾಮಿನೇಟ್ಸ್ ಇಂಡಿಯಾ ಲಿ.,
ಬೆಳವಾಡಿ ಐ.ಎ. ಮೈಸೂರು. ಬಾಯ್ಲರ್ ಅಂಟೆಂಡೆಂಟ್ 1

95 ಆಸ್ಲಾಡೀಸಲ್ ವರ್ಕ್ಸ್, ಎಂ. ಡಿ. ಸ್ಟ್ರೀಟ್ ಬ್ಲಾಕ್
ಲಷ್ಕರ್ ಮೊಹಲ್ಲಾ, ಮೈಸೂರು-1 ಮೆಕಾನಿಕ್ ಡೀಸಲ್ 1

96 ಲೈಟ್‌ಮೆಟಲ್ ಎಕ್ಸ್ಟ್ರಾಷನ್ ಪ್ರೈ. ಲಿ., ಎಂ.ಎಂ.ವಿ. 1
ನಂ. 43/5, ಅಶೋಕ ರಸ್ತೆ, ಇಲವಾಲ ಮೈಸೂರು

97 ಬಾಟ ಡೀಸಲ್ ಆಟೋ ವರ್ಕ್ಸ್, ಮಹದೇವಪುರ ವೆಲ್ಡರ್ 1
ರಸ್ತೆ, ವಿನ್ಸಾರ್ ಮಿಲ್ಸ್ ಹತ್ತಿರ, ಮೈಸೂರು ಮೆಕ(ಡೀಸಲ್) 1

98 ಮೈಸೂರು ಆಕ್ಸಿಜನ್ ಕಂ. ಲಿ., M.W.M. 1
ಹೂಟಗಳ್ಳಿ ಐ.ಎ., ಮೈಸೂರು

99 ಶ್ರೀ ವೇಣು ಆಟೋ ಗ್ಯಾರೇಜ್ M.M.W 1
ಎಲೆತೋಟ ಹತ್ತಿರ, ಜೆ.ಎಲ್.ಬಿ. ರಸ್ತೆ,
ಮೈಸೂರು ಮೆಕಾನಿಕ್ (ಡೀಸೆಲ್) 1

100 ಮೂರ್ತಿ ಟೈಲರ್ಸ್, ಎಂ.ಜಿ.ಎಸ್. ರಸ್ತೆ ಟೈಲರ್(ಮೆನ್) 1
ತ್ಯಾಗರಾಜ ಕಾಲೋನಿ, ನಂಜನಗೂಡು

101 ಜೆ.ಎಸ್. ಇಂಜಿನಿಯರಿಂಗ್ ವರ್ಕ್ಸ್, ಗುಡ್ ಟರ್ನರ್ 1
ಶೆಪರ್ಡ್ ಕಾನ್ವೆಂಟ್ ಎದುರು,
ಲಷ್ಕರ್‌ಮೊಹಲ್ಲಾ, ಮೈಸೂರು-1

102 ಕ್ರಿಯೆಟರ್ ಮ್ಯಾನುಫ್ಯಾಕ್ಚರ್, ನಂ. ಎ4 ಟರ್ನರ್ 1
ಸಿ.ಎಂ.ಟಿ., ಐ.ಇ., ಕೆ.ಆರ್.ಎಸ್.ರಸ್ತೆ ಮೆಕ. (ಗ್ರೈಂಡರ್) 1
ಮೈಸೂರು -16

103 ಪ್ರೇಮ ಗಿಯರ್ ಮತ್ತು ಪ್ರೆಸಿಷನ್ ವರ್ಕ್ಸ್, ಟರ್ನರ್ 1

16ನೇ ಪುಟದಿಂದ

ರೇವತಿ ನನ್ನ ಮೇಲೆ ಅನುಮಾನ!

ಇದೆಂತಹ ವಿಪರ್ಯಾಸ!

ನನ್ನನ್ನು ಈ ರೀತಿ ಅನುಮಾನಿಸುತ್ತಿರುವ ಹೆಣ್ಣಿಗೆ ನನ್ನ ಬಗ್ಗೆ ಪ್ರೀತಿ ಮೂಡಲು ಸಾಧ್ಯವೆ?

ಪ್ರಸನ್ನ ರಮ್ ಕುಡಿಯುತ್ತಿದ್ದಾನೆ!

ರೇವತಿ ಆಸ್ಪತ್ರೆಯಲ್ಲಿ ಇದ್ದಾಳೆ. ಈಗ ಈ ಬೃಹದಾಕಾರದ ಬಂಗಲೆಯಲ್ಲಿ ಅಣ್ಣಾ, ವೀರಭದ್ರ, ಪ್ರಸನ್ನ ಇದ್ದಾರೆ.

ಆಗ ರಾತ್ರಿ ಒಂಭತ್ತು ಗಂಟೆ!

ಕೆಲಸದ ಆಳುಗಳು ಊಟ ಮಾಡಿ ಮಲಗಿದ್ದಾರೆ. ವೀರ ಭದ್ರನ ರೂಮಿನ ಹತ್ತಿರ ರಕ್ಷಣೆಗಾಗಿ ನಿಂತಿದ್ದ ಇಬ್ಬರು ಕೆಲಸಗಾರರು ಅಲ್ಲಿಯೇ ತೂಕಡಿಸುತ್ತಿದ್ದಾರೆ.

ಪ್ರಸನ್ನ ರಮ್ ಹೀರುತ್ತಿದ್ದಾನೆ!

ಚಿಂತೆಗಳು ತಲೆ ಕೆಡಿಸಿದೆ.

ಆಗ ಕೇಳಿಸಿತು ಹೆಜ್ಜೆ ಶಬ್ದ!

ಗಮನ ಕೊಡಲಿಲ್ಲ. ಕೆಲಸಗಾರರು ಓಡಾಡುತ್ತಿರಬೇಕೆಂದು ಅವನು ತನ್ನ ಪಾಡಿಗೆ ತಾನು ಕುಡಿಯಲಾರಂಭಿಸದನು.

ಕಿಟಕಿಯ ಹತ್ತಿರ ನೆರಳು ಕಂಡಿತು!

ಯಾರೋ ಹೊಂಚು ಹಾಕಿ ಕಾಯುತ್ತಿದ್ದಾರೆ!

ಪ್ರಸನ್ನ ತಡ ಮಾಡಲಿಲ್ಲ. ಗ್ಲಾಸಿನಲ್ಲಿದ್ದ ರಮ್ ಅನ್ನು ಕುಡಿದು ಮುಗಿಸಿ ಬಾಗಿಲಿನ ಹತ್ತಿರ ಬಂದನು.

ಸರ್ರನೆ ಬಾಗಿಲನ್ನು ತೆರೆದನು.

ಬಿರುಗಾಳಿ ನುಗ್ಗಿದಂತೆ...

ಯಾರೋ ನುಗ್ಗಿದರು, ಪ್ರಸನ್ನನ ಮುಖಕ್ಕೆ ಬಲವಾದ ಪ್ರಹಾರ! ಅದೇ ಸಾಲಿಡ್ ಪಂಚ್!

ಪ್ರಸನ್ನ ನೋವಿನಿಂದ ಕಿರುಚಿದನು.

ಈಗ ವ್ಯಕ್ತಿಯೊಂದು ಅವನನ್ನು ತಳ್ಳಿಕೊಂಡು ನುಗ್ಗಿತು. ರೂಮಿನ ಬಾಗಿಲು ಹಾಕಿತು!

ಪ್ರಸನ್ನ ಆ ವ್ಯಕ್ತಿಯನ್ನು ಗುರುತಿಸಿದನು. ಬಾಯಿಂದ ಅತ್ಯಾಶ್ಚರ್ಯದ ಉದ್ಗಾರ!

"ಅರೆ...ನೀನಾ...!?.

(ಮುಂದುವರೆಯುತ್ತದೆ)

---

ಎ.-2, ಸಿ.ಎಂ.ಟಿ. ಐ.ಇ. ಕೆ.ಆರ್.ಎಸ್. ರಸ್ತೆ,
ಮೈಸೂರು -16

104 ಸೂಪರ್ ಆಟೋ ಇಂಜಿನಿಯರಿಂಗ್ ವರ್ಕ್ಸ್ ಟರ್ನರ್ 1
ನಂ. ಬಿ. 1989, 2ನೇ ಸ್ವಾಡಿ ರಸ್ತೆ, ವೆಲ್ಡರ್ 1
ಮಿಷಿನ್ ಆಸ್ಪತ್ರೆ ರಸ್ತೆ, ಎಂ. ಮೊಹಲ್ಲಾ
ಮೈಸೂರು -20

105 ಗಣೇಶ ಪ್ಲಾಸ್ಟಿಕ್ ಇಂಡಸ್ಟ್ರೀಸ್, ಸಿ. -119
ಪ್ಲಾಸ್ಟಿಕ್ ಮೌಲ್ಡ್ ಮೇಕರ್ 1
ಯಾದವಗಿರಿ, ಐ.ಇ. ಮೈಸೂರು-20

ಮುಂದುವರಿಯುತ್ತದೆ.

---

**ಎಲಿ ಹೊತ್ತ್‌ತ್ತೇಳ್‌ಕನ, ಹುಲಿ ಹೋತತ್ತೇಳುವ ಜನ - ಮುದ್ಯನ ಪ್ರವೀಣ್**

**ಕೊಡಗು ಸಂಗಾತಿಯ ಸಂಚಾಲಕ, ಏಜೆಂಟ್, ವರದಿ, ಕಲೆಕ್ಷನ್ ಜಾಹಿರಾತುಗಳಿಗಾಗಿ ಈ ಕೆಳಕಾಣಿಸಿದವರನ್ನು ಆಯ್ಕೆ ಮಾಡಲಾಗಿದೆ. ಓದುಗರಿಂದ ಸಹಕಾರವನ್ನು ನಿರೀಕ್ಷಿಸಲಾಗಿರುವುದು.**



**ತೆಕ್ಕಡೆ ಬಿ. ಕುಮಾರ್**
ಮುತ್ತಾರ್ಮುಡಿ ಗ್ರಾಮ
ಮೂರ್ನಾಡು ಅಂಚೆ.

**ಗ್ರಾಮಗಳು**
ಮುತ್ತಾರ್ಮುಡಿ
ಮೂರ್ನಾಡು
ಕಾಂತೂರು
ಐಕೋಳ
ಹೊದ್ದೂರು
ಕಿಗ್ಗಾಲು
ಹಾಕತ್ತೂರು
ಕುಂಬಳದಾಳು



**ಕೊಡೆಕಲ್ಲು ಗಣೇಶ್**
ಗುಡ್ಡೆ ಹೊಸೂರು ಗ್ರಾಮ
ಮತ್ತು ಅಂಚೆ

**ಗ್ರಾಮಗಳು**
ಗುಡ್ಡೆ ಹೊಸೂರು
ಬಾಳುಗೋಡು
ಬಸವನ ಹಳ್ಳಿ
ಬೈಚನ ಹಳ್ಳಿ
ಅತ್ತೂರು
ಹೇರೂರು



**ಚಿಲ್ಲನ ಉತ್ತಪ್ಪ**
ಪಾಲೂರು ಗ್ರಾಮ ಅಂಚೆ
ಮಡಿಕೇರಿ ತಾಲೂಕು.

**ಗ್ರಾಮಗಳು**
ಪಾಲೂರು
ಕುಯ್ಯಂಗರೇರಿ
ಕೊಟ್ಟಮುಡಿ
ಕುಂಬಳದಾಳು

## ಮಾನ್ಯ ಚಂದದಾರರಲ್ಲಿ ವಿನಂತಿ

ಕೊಡಗು ಸಂಗಾತಿ ಪತ್ರಿಕೆಯನ್ನು ನಿಯತ್ತಾಗಿ ಚಂದದಾರರಿಗೆ ಕಳುಹಿಸುತ್ತಿದ್ದೇವೆ. ಹಲವಾರು ಚಂದದಾರರು ಇನ್ನೂ ನವೀಕರಿಸಿಕೊಂಡಿರವುದಿಲ್ಲ. ಸಾಕಷ್ಟು ಜ್ಞಾಪನ ಪತ್ರ ಕಳುಹಿಸಲಾಗಿದೆ. ಪ್ರತಿಯೊಬ್ಬ ಚಂದದಾರರ ವಿಳಾಸಕ್ಕೆ ತೆರಳಿ ಹಣ ವಸೂಲಾತಿ ಮಾಡುವುದು ಆಗದ ಕೆಲಸ. ಖರ್ಚು ವಿಪರೀತವಾಗುತ್ತದೆ. ನಾವು ಪುಸ್ತಕ ಕಳುಹಿಸುತ್ತಿರುವುದು ಮೈಸೂರಿನಿಂದ. ನಮ್ಮ ಕಷ್ಟವನ್ನು ಓದುಗರು, ಚಂದದಾರರು ಅರಿತುಕೊಂಡು ಮನಿ ಆರ್ಡರ್, ಡಿಮಾಂಡ್ ಡ್ರಾಫ್ಟ್ ಮೂಲಕ ಕಳುಹಿಸುವ ಕೃಪೆ ದಯವಿಟ್ಟು ಮಾಬೇಕು. ಇಲ್ಲದಿದ್ದರೆ ಇರುವ ಏಕೈಕ ಪತ್ರಿಕೆಯನ್ನು ನಡೆಸಿಕೊಂಡು ಹೋಗುವುದು ಸಂಗಾತಿಗೆ ಬಹು ತ್ರಾಸವಾದೀತು. ಓದುಗರು ಈ ಬಗ್ಗೆ ಚಿಂತಿಸಬೇಕೆಂದು ನಮ್ಮ ಪ್ರಾರ್ಥನೆ. ಜೈ ಶೃಂಗೇರಿ ಶಾರದಾಂಬೆ.

— ಸಂಪಾದಕಿ.

## ವರ ಬೇಕಾಗಿದೆ

ಬೆಂಗಳೂರಿನಲ್ಲಿ ಕೆಲಸದಲ್ಲಿರುವ ಡಿಗ್ರಿ ಓದಿದ 30ವರ್ಷ ಪ್ರಾಯದ ಒಳ್ಳೆಯ ಗುಣನಡತೆಯ ಸುಂದರ ಕೊಡಗಿನ ಗೌಡ ಯುವತಿಗೆ ಯೋಗ್ಯನಾದ ಉತ್ತಮ ಅಭ್ಯಾಸ/ಗುಣವಿರುವ ಒಳ್ಳೆಯ ಗೌಡವರ ಕೂಡಲೆ ಬೇಕಾಗಿದೆ. ಸಂಪರ್ಕಿಸಿ.

**Box No. 7. C/o Kodagu Sangathi.**
No. 35, Savitha Nilaya. Ist Cross, 4th Block,
Jayalakshmi puram, Mysore-12
Phone - 0821 / 516771.

# ಅರೆಭಾಷೆ ಗೌಡರ ಸಂಸ್ಕೃತಿ ಸಂಪ್ರದಾಯಗಳ ಜಾನಪದ ಬಿಂಬಿತ ಹಸೆಮಣೆ ಪುಸ್ತಕ ಬಿಡುಗಡೆ.






ಬೈತಡ್ಕ ಜಾನಕಿ ಬೆಳ್ಯಪ್ಪ

**ಹಸೆಮಣೆ :** ಹತ್ತು ಕುಟುಂಬ ಹದಿನೆಟು ಗೋತ್ರದ ಗೌಡ ಜನಾಂಗದ ಭಾಷೆ, ಸಂಸ್ಕೃತಿ, ಸಂಪ್ರದಾಯ, ಆಚಾರ, ವಿಚಾರ, ನೀತಿ ನಿಯಮ, ಕಟ್ಟು, ಕಟ್ಟಳೆ, ಸೋಬಾನೆ ಪದ ಪುಂಜಗಳ ಸರಮಾಲೆಯನ್ನು ಸಂಗ್ರಹಿಸಿ ಕ್ರೋಢಿಕರಿಸಿ ಪುಸ್ತಕ ರೂಪದಲ್ಲಿ ಹೊರ ತರಲಾಗಿದೆ. ಜನಾಂಗದ ಭಾಷೆ ಮತ್ತು ಸಂಸ್ಕೃತಿಯನ್ನು ಉಳಿಸುವ ನಿಟ್ಟಿನಲ್ಲಿ ಯುವ ಜನಾಂಗದ ಭವಿಷ್ಯಕ್ಕೊಸ್ಕರ ಹಸೆಮಣೆ ಪುಸ್ತಕವು ಮೂಡಿಬಂದಿದೆ.

ಪ್ರಕಾಶನ : ಕೊಡಗು ಸಂಗಾತಿ, ಮೈಸೂರು,
ಪುಟಗಳು : 108+4, ಬೆಲೆ : ರೂ. 50/-
ಪ್ರಥಮ ಮುದ್ರಣ : 2000;
ಮುದ್ರಣ : ಶಕ್ತಿ ಪ್ರಿಂಟರ್ಸ್,
ಇಂಡಸ್ಟ್ರಿಯಲ್ ಎಸ್ಟೇಟ್, ಮಡಿಕೇರಿ.

## ಪುಸ್ತಕ ದೊರೆಯುವ ಸ್ಥಳಗಳು

1. ಕೊಡಗು ಸಂಗಾತಿ ಕಛೇರಿ, ಮೈಸೂರು, Phone : 516771
2. ಬೈತಡ್ಕ ಜಾನಕಿ ಬೆಳ್ಯಪ್ಪ, : 21-16, ರೇಸ್ ಕೋರ್ಸ್ ರಸ್ತೆ, LIC ಕಛೇರಿ ಹತ್ತಿರ ಸೇತುವೆ ಎದುರು, ಮಡಿಕೇರಿ, ಕೊಡಗು, ದೂರವಾಣಿ : 08272/28047.
3. ಪಾಂಡ್ಯನ್ ಕ್ಯಾಸೆಟ್ ಅಂಗಡಿ : ಖಾಸಗಿ ಬಸ್ ನಿಲ್ದಾಣ, ಮಡಿಕೇರಿ, ದೂರವಾಣಿ : 29620
4. ಕೊಡಗು ಸಂಗಾತಿಯ ಎಲ್ಲಾ ಏಜೆಂಟರ ಹತ್ತಿರ ದೊರೆಯುತ್ತದೆ.

ಪ್ರಕಟಣೆ : ಬೈತಡ್ಕ ನಂಜಪ್ಪ ಮತ್ತು ಪ್ರಿಸಿಲ್ಲಾ ದಂಪತಿಗಳು ಹಾಗೂ ಬೈತಡ್ಕ ದಿನೇಶ್.

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ **: 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.